KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೧೦ (ಭಾದ್ರಪದ ೪, ಶಕ ವರ್ಷ ೧೯೩೨) | ಸಂಚಿಕೆ ೩೪ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ. ಇಡಿ 165 ಎಸ್‌ಒಹೆಚ್ 2010, ಬೆಂಗಳೂರು, ದಿನಾಂಕ: 20ನೇ ಜುಲೈ 2010**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಶಾಲೆಗಳಲ್ಲಿ ಹಾಗೂ ಅನುಕ್ರಮವಾಗಿ ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) 58ನೇ ಪ್ರಕರಣದ (14) ಮತ್ತು (30)ನೇ ಖಂಡದಲ್ಲಿ ಹಾಗೂ ಪ್ರಕರಣ 427ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಗರಪಾಲಿಕೆಗಳ ವ್ಯಾಪ್ತಿಯಲ್ಲಿನ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ, ಹಾಗೂ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) 323ನೇ ಪ್ರಕರಣದ (4)ನೇ ಉಪ ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪುರಸಭೆ ವ್ಯಾಪ್ತಿಯಲ್ಲಿನ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಮತ್ತು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ 14) 145ನೇ ಪ್ರಕರಣದ (2)ನೇ ಉಪ-ಪ್ರಕರಣದ ಖಂಡ (ii) ರ ಉಪ–ಖಂಡ (ಎಫ್)ಹಾಗೂ ಖಂಡ (iii) ಮತ್ತು 146ನೇ ಪ್ರಕರಣದ (1) ಮತ್ತು (2)ನೇ ಉಪ–ಪ್ರಕರಣಗಳೊಂದಿಗೆ ಓದಲಾದ ಸದರಿ ಅಧಿನಿಯಮದ 316ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿನ ಪ್ರೌಢಶಾಲೆಗಳಲ್ಲಿ ಶಾಲಾಭಿವೃದ್ಧಿ ಮತ್ತು ನಿರ್ವಹಣ ಸಮಿತಿ ಮಾದರಿ ನಿಯಮಗಳನ್ನು ಜಾರಿಗೆ ತರಲು ಉದ್ದೇಶಿಸಿದೆ.

ಈ ನಿಯಮಗಳಿಂದ ತೊಂದರೆಗೊಳಗಾಗಬಹುದಾದ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಲಾಗಿದೆ. ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಶಿಕ್ಷಣ ಇಲಾಖೆ, 6ನೇ ಮಹಡಿ, ಬಹುಮಹಡಿ ಕಟ್ಟಡ, ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು–560 001 ಇವರಿಗೆ ಸಲ್ಲಿಸತಕ್ಕದ್ದು. ಮೇಲೆ

ನಿಗಧಿಪಡಿಸಿದ ಅವಧಿಯೊಳಗೆ ಯಾವುದೇ ವ್ಯಕ್ತಿಗಳಿಂದ ಸ್ವೀಕರಿಸಬಹುದಾದ ಆಕ್ಷೇಪಣೆ ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಶೀಲಿಸುತ್ತದೆ.

**ಕರಡು ಮಾದರಿ ನಿಯಮಗಳು**

**ನಗರ ಪಾಲಿಕೆ ಮತ್ತು ಪುರಸಭೆ ವ್ಯಾಪ್ತಿಯಲ್ಲಿನ ಪ್ರಾಥಮಿಕ/ ಪ್ರೌಢಶಾಲೆಗಳಲ್ಲಿ ಹಾಗೂ ತಾಲ್ಲೂಕು ಪಂಚಾಯತ್ ವ್ಯಾಪ್ತಿಯಲ್ಲಿನ ಪ್ರೌಢಶಾಲೆಗಳಲ್ಲಿ ಎಸ್.ಡಿ.ಎಂ.ಸಿ. ರಚನೆ**

**ಅಧ್ಯಾಯ – I**

**ಪ್ರಾರಂಭಿಕ**

**1. ಹೆಸರು ಪ್ರಾರಂಭ ಮತ್ತು ಅನ್ವಯಿಸುವಿಕೆ.–** (1) ಈ ನಿಯಮಗಳನ್ನು ಕರ್ನಾಟಕ ಪೌರ ನಿಗಮಗಳ, ಪೌರ ಸಭೆಗಳ ಮತ್ತು ತಾಲ್ಲೂಕು ಪಂಚಾಯತ್‌ಗಳ ಶಾಲಾಭಿವೃದ್ಧಿ ಮತ್ತು ನಿರ್ವಹಣ ಸಮಿತಿ (ಮಾದರಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಈ ನಿಯಮಗಳನ್ನು ಪ್ರಸ್ತುತ ಇರುವ ಎಸ್.ಡಿ.ಎಂ.ಸಿ.ಗಳ ಅವಧಿ ಮುಗಿದ ನಂತರ ಅಥವಾ ಇವುಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ ಮೂವತ್ತು ದಿನಗಳೊಳಗೆ ಇವುಗಳಲ್ಲಿ ಯಾವುದು ಮೊದಲೋ ಅಂದಿನಿಂದ ಜಾರಿಗೆ ಬರುತ್ತದೆ.

(3) ಈ ನಿಯಮಗಳು ಪೌರ ಸಭಾ ವ್ಯಾಪ್ತಿಯ ಮತ್ತು ಪೌರ ನಿಗಮದ ವ್ಯಾಪ್ತಿಯಲ್ಲಿನ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಅನ್ವಯಿಸತಕ್ಕದ್ದು ಮತ್ತು ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿನ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ಈ ನಿಯಮಗಳನ್ನು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರ ಪ್ರಕರಣ 316ರಡಿಯಲ್ಲಿ ರಚಿಸಲಾದ ಮಾದರಿ ಉಪವಿಧಿಗಳೆಂದು ಭಾವಿಸಿ ಅನ್ವಯಿಸತಕ್ಕದ್ದು.

**2. ಪರಿಭಾಷೆಗಳು**–ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯ ಪಡಿಸದ ಹೊರತು, ಈ ಮುಂದಿನ ಪದಗಳು ಮತ್ತು ಪದಾವಳಿಗಳನ್ನು ಈ ಮುಂದಿನ ಅರ್ಥಗಳಲ್ಲಿ ಬಳಸಲಾಗಿದೆ,–

ಎ. "ಅಧಿನಿಯಮ" ಎಂದರೆ ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ, 14) ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ, 22), ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ, 14).

ಬಿ. "ಶೈಕ್ಷಣಿಕ ವರ್ಷ" ಎಂದರೆ ಕರ್ನಾಟಕ ಶಿಕ್ಷಣ ಅಧಿನಿಯಮ, 1983ರ ಪ್ರಕರಣ 2ರ ಖಂಡ (1)ರಲ್ಲಿ ಪರಿಭಾಷಿಸಿದಂತೆ ಮತ್ತು ಆಗಿಂದಾಗ್ಗೆ ತಿದ್ದುಪಡಿ ಮಾಡಿದಂತೆ " ಶೈಕ್ಷಣಿಕ ವರ್ಷ";

ಸಿ. "ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ' ಎಂದರೆ ಕರ್ನಾಟಕ ಪೌರನಿಗಮಗಳ ಅಧಿನಿಯಮದ 58ನೇ ಪ್ರಕರಣದ (14) ಮತ್ತು (30)ನೇ ಖಂಡದ ಅನುಸಾರ ರಚಿತವಾದ " ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ";

ಡಿ. "ವಾರ್ಡ್ ಸಮಿತಿ" ಎಂದರೆ ಪೌರ ನಿಗಮಗಳ ಅಧಿನಿಯಮದ 13–A ರ ಪ್ರಕರಣ ಅನುಸಾರ ರಚಿತವಾಗುವ ವಾರ್ಡ್ ಸಮಿತಿ;

ಇ. "ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ" ಎಂದರೆ ಕರ್ನಾಟಕ ಪೌರಸಭೆಗಳ ಅಧಿನಿಯಮದ 63ನೇ ಪ್ರಕರಣದ (1) ನೇ ಉಪ–ಪ್ರಕರಣದ ಖಂಡ (ಬಿ) ಅನುಸಾರ ರಚಿತವಾದ "ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ" ಮತ್ತು 71ನೇ ಪ್ರಕರಣದ ಅನುಸಾರ ರಚಿತವಾಗುವ ಜಂಟಿ ಸಮಿತಿ ;

ಎಫ್. "ಸಾಮಾನ್ಯ ಸ್ಥಾಯಿ ಸಮಿತಿ" ಎಂದರೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ 148ನೇ ಪ್ರಕರಣದ (1) ನೇ ಉಪ–ನಿಯಮದ ಖಂಡ (ಎ) ಅನುಸಾರ ರಚಿತವಾದ "ಸಾಮಾನ್ಯ ಸ್ಥಾಯಿ ಸಮಿತಿ"

ಜಿ. "ವಾರ್ಷಿಕ ಕ್ರಿಯಾ ಯೋಜನೆ' ಎಂದರೆ ಶಾಲೆಯ ಸಮಗ್ರ ಅಭಿವೃದ್ಧಿಯ ಸಂಬಂಧದಲ್ಲಿ ಮುಖ್ಯ ಶಿಕ್ಷಕರು ವಾರ್ಷಿಕ ಆಧಾರದ ಮೇಲೆ ರೂಪಿಸಿದ ಯೋಜನೆ ;

ಹೆಚ್. ಪ್ರಾಥಮಿಕ ಶಾಲೆಯ "ಮಗು' ಎಂದರೆ 8ನೇ ತರಗತಿಯವರೆಗೆ ಶಾಲಾ ಶಿಕ್ಷಣವನ್ನು ಪೂರ್ಣಗೊಳಿಸಿಲ್ಲದ ಐದರಿಂದ ಹದಿನಾಲ್ಕು ವರ್ಷಗಳ ವಯೋಮಿತಿಯ "ಮಗು" ;

**ವಿವರಣೆ:–** ಪ್ರೌಢ ಶಾಲೆಯ "ಮಗು" ಎಂದರೆ 10 ನೇ ತರಗತಿಯವರೆಗೆ ಶಾಲಾ ಶಿಕ್ಷಣವನ್ನು ಪೂರ್ಣಗೊಳಿಸಿಲ್ಲದ ಹದಿನಾರು ವರ್ಷಗಳ ವಯೋಮಿತಿಯ "ಮಗು"

ಐ. "ಎಸ್.ಡಿ.ಎಂ.ಸಿ" ಎಂದರೆ ಈ ನಿಯಮಗಳಿಗೆ ಅನುಸಾರವಾಗಿ ರಚಿಸಲಾದ "ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿ "

ಜೆ. "ಸದಸ್ಯ" ಎಂದರೆ ಎಸ್‌ಡಿಎಂಸಿಯ ಸದಸ್ಯ ಮತ್ತು ಇದು, ಈ ಉಪವಿಧಿಗಳ ಅಡಿಯಲ್ಲಿ ನಿಯಮಿಸಲಾದ ಪ್ರಕ್ರಿಯೆಗಳ ಅನುಸಾರವಾಗಿ ಎಸ್‌ಡಿಎಂಸಿಗೆ ಸಹ ಸದಸ್ಯರಾಗಿ ಆಯ್ಕೆ ಮಾಡಲಾದ ಅಥವಾ ನಾಮ ನಿರ್ದೇಶಿಸಲಾದ ಅಂಥ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ :

ಕೆ. "ನಗರ ಪ್ರದೇಶ"ಎಂದರೆ, ಕರ್ನಾಟಕ ಪೌರ ನಿಗಮಗಳ ಅಧಿನಿಯಮದ ಪ್ರಕರಣ 3 ಮತ್ತು 4 ರ ಅಡಿಯಲ್ಲಿ ಪರಿಭಾಷಿಸಿದಂಥ "ನಗರ ಪ್ರದೇಶ";

ಎಲ್. "ಪೌರ ಸಭೆ ಪ್ರದೇಶ" ಎಂದರೆ, ಕರ್ನಾಟಕ ಪೌರಸಭೆಗಳ ಅಧಿನಿಯಮದ ಪ್ರಕರಣ 3 ಮತ್ತು 350 ರ ಅಡಿಯಲ್ಲಿ ಪರಿಭಾಷಿಸಿದಂಥ "ಪೌರ ಸಭೆ ಪ್ರದೇಶ" ;

ಎಂ. "ತಾಲ್ಲೂಕು ಪಂಚಾಯತ್" ಎಂದರೆ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ 2ನೇ ಪ್ರಕರಣದ ಖಂಡ (39)ರ ಅಡಿಯಲ್ಲಿ ಪರಿಭಾಷಿಸಿದಂಥ "ತಾಲ್ಲೂಕು ಪಂಚಾಯತಿ" ;

ಎನ್. "ತಂದೆ/ತಾಯಿ" ಎಂದರೆ ಶಾಲೆಯಲ್ಲಿ ಓದುತ್ತಿರುವ ಮಗುವಿನ ಸಹಜ ತಂದೆ/ತಾಯಿ;

ಒ. "ತಂದೆ ತಾಯಿಯರ ಪರಿಷತ್ತು" ಎಂದರೆ ನಿರ್ದಿಷ್ಟ ಶಾಲೆಯ ರಿಜಿಸ್ಟರಿನಲ್ಲಿ ದಾಖಲು ಮಾಡಿರುವ ಮತ್ತು ಹಾಜರಾಗುತ್ತಿರುವ ಮಕ್ಕಳ ಎಲ್ಲಾ ತಂದೆ ತಾಯಿಯರ ಪರಿಷತ್ತು;

**ವಿವರಣೆ.–**

(i) ಸ್ಪಷ್ಟೀಕರಣದ ಸಲುವಾಗಿ, ಮಗುವಿನ ತಂದೆ ತಾಯಿ ಇಬ್ಬರೂ ತಂದೆ ತಾಯಿಯರ ಪರಿಷತ್ತಿನ ಸದಸ್ಯರಾಗಿರತಕ್ಕದ್ದೆಂದು ಈ ಮೂಲಕ ನಿರ್ದಿಷ್ಟಪಡಿಸಲಾಗಿದೆ.

(ii) ಈ ನಿಯಮಗಳ ಅಡಿಯಲ್ಲಿ ಪರಿಭಾಷಿಸಿದಂತೆ ತಂದೆ ತಾಯಿಯರ ಪರಿಷತ್‌ನ್ನು ಕರ್ನಾಟಕ ಪೌರ ನಿಗಮಗಳ ಅಧಿನಿಯಮದ 13–A ಪ್ರಕರಣದಡಿಯಲ್ಲಿ ರಚಿಸಲಾದ "ವಾರ್ಡ್ ಸಮಿತಿಯ ಉಪಸಮಿತಿ" ಎಂಬುದಾಗಿ ಪ್ರಾಥಮಿಕ ಶಾಲೆಗಳಲ್ಲಿ ಭಾವಿಸತಕ್ಕದ್ದು.

(iii) ಈ ನಿಯಮಗಳ ಅಡಿಯಲ್ಲಿ ಪರಿಭಾಷಿಸಿದಂತೆ ತಂದೆತಾಯಿಯರ ಪರಿಷತ್‌ನ್ನು ಕರ್ನಾಟಕ ಪೌರಸಭೆಗಳ ಅಧಿನಿಯಮದ 58ನೇ ಪ್ರಕರಣದ (14) ಮತ್ತು (30)ರ ಖಂಡದ ಅಡಿಯಲ್ಲಿ ರಚಿಸಲಾದ "ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಉಪ ಸಮಿತಿ" ಎಂಬುದಾಗಿ ಭಾವಿಸತಕ್ಕದ್ದು.

(iv) ಈ ನಿಯಮಗಳ ಅಡಿಯಲ್ಲಿ ಪರಿಭಾಷಿಸಿದಂತೆ ತಂದೆ ತಾಯಿಯರ ಪರಿಷತ್‌ನ್ನು ಕರ್ನಾಟಕ ಪೌರಸಭೆಗಳ ಅಧಿನಿಯಮದ 63ನೇ ಪ್ರಕರಣದ (1) ನೇ ಉಪ–ಪ್ರಕರಣದ ಖಂಡ (ಬಿ) ಮತ್ತು 71ರ ಅಡಿಯಲ್ಲಿ "ಇತರ ಇಂತಹುದೇ ಮಂಡಳಿಗಳು" ಎಂಬುದಾಗಿ ಭಾವಿಸತಕ್ಕದ್ದು.

(V) ಈ ನಿಯಮಗಳ ಅಡಿಯಲ್ಲಿ ಪರಿಭಾಷಿಸಿದಂತೆ ತಂದೆ ತಾಯಿ ಪರಿಷತ್‌ನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಪ್ರಕರಣ 3ರ ಅಡಿಯಲ್ಲಿ "ಇತರ ಇಂತಹುದೇ ಮಂಡಳಿಗಳು" ಎಂಬುದಾಗಿ ಭಾವಿಸತಕ್ಕದ್ದು.

ಪಿ. "ಅಧ್ಯಕ್ಷ" ಎಂದರೆ ಆಯಾ ಕ್ಷೇತ್ರದ ಶಾಸಕರು ಅಥವಾ ಶಾಸಕರಿಂದ ನಾಮನಿರ್ದೇಶಿತ ವ್ಯಕ್ತಿ, ಶಾಲಾಭಿವೃದ್ಧಿ ಮತ್ತು ನಿರ್ವಹಣಾ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು.

ಕ್ಯೂ. "ಸದಸ್ಯ ಕಾರ್ಯದರ್ಶಿ" ಎಂದರೆ ಎಸ್‌ಡಿಎಂಸಿಯ ಸದಸ್ಯ ಕಾರ್ಯದರ್ಶಿ ;

ಆರ್. "ಪ್ರಾಥಮಿಕ ಶಾಲೆ" ಎಂದರೆ ಯಾವುದೇ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಹಿರಿಯ ಪ್ರಾಥಮಿಕ ಶಾಲೆ ಅಥವಾ ಮಾಧ್ಯಮಿಕ ಶಾಲೆ, ಶಿಕ್ಷಣ ಖಾತರಿ ಯೋಜನಾ ಕೇಂದ್ರ, ರೆಸಿಡೆನ್ಸಿಯಲ್ ಬ್ರಿಡ್ಜ್– ಕೋರ್ಸ್ ಕೇಂದ್ರ ಅಥವಾ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವುದಕ್ಕಾಗಿ ಆಗಿಂದಾಗ್ಗೆ ರಾಜ್ಯವು ನಿಯಮಿಸಿದ ಯಾವುದೇ ಇತರೆ ಸಂಸ್ಥೆ / ರಚನೆಯನ್ನು ಒಳಗೊಳ್ಳುತ್ತದೆ.

ಎಸ್. "ಪ್ರೌಢಶಾಲೆ" ಎಂದರೆ ಪ್ರೌಢಶಾಲೆಗಳಲ್ಲಿ 8 ರಿಂದ 10ನೇ ತರಗತಿ ಶಿಕ್ಷಣ ನೀಡುವ ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿನ ಪದವಿ ಪೂರ್ವ ವಿಭಾಗ ಹೊರತುಪಡಿಸಿ ಯಾವುದೇ ಸರ್ಕಾರಿ ಪ್ರೌಢಶಾಲೆ/ಪ್ರೌಢ ಶಿಕ್ಷಣವನ್ನು ಒದಗಿಸುವುದಕ್ಕಾಗಿ ಆಗಿಂದಾಗ್ಗೆ ರಾಜ್ಯವು ನಿಯಮಿಸಿದ ಯಾವುದೇ ಇತರೆ ಸಂಸ್ಥೆಯನ್ನು ಒಳಗೊಳ್ಳುತ್ತದೆ.

**ವಿವರಣೆ:–** "ಶಾಲೆ" ಎಂಬುದರಲ್ಲಿ ಶಾಲೆಗೆ ಸೇರಿದ ಯಾವುದೇ ವಿದ್ಯಾರ್ಥಿ ನಿಲಯ/ನಿವಾಸ ಸೌಲಭ್ಯ ಒಳಗೊಳ್ಳುತ್ತದೆ.

ಟಿ. "ಎಲಿಮೆಂಟರಿ ಶಿಕ್ಷಣ" ಎಂದರೆ ಯಾವುದೇ ಶಾಲೆಯಲ್ಲಿನ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಿಕ್ಷಣ ;

ಯು. "ಸೆಕೆಂಡರಿ ಶಿಕ್ಷಣ" ಎಂದರೆ ಯಾವುದೇ ಶಾಲೆಯಲ್ಲಿನ 8 ರಿಂದ 10ನೇ ತರಗತಿ ಶಿಕ್ಷಣ, ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿನ ಪದವಿಪೂರ್ವ ವಿಭಾಗ ಹೊರತು ಪಡಿಸಿ 8 ರಿಂದ 10ನೇ ತರಗತಿಯನ್ನು ಒಳಗೊಳ್ಳುತ್ತದೆ.

ವಿ. "ಶಾಲಾ ನಿಧಿ" ಎಂದರೆ ಪ್ರತಿಯೊಂದು ಶಾಲೆಗಾಗಿ ಇರುವ ಒಂದು ಅಭಿವೃದ್ಧಿ ನಿಧಿ ಮತ್ತು ಇದರಲ್ಲಿ ಸರ್ಕಾರವು ಬಿಡುಗಡೆ ಮಾಡುವ ವೇತನ ಅನುದಾನವನ್ನು ಹೊರತುಪಡಿಸಿ ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ಅಥವಾ ಜಿಲ್ಲಾ ಪಂಚಾಯತಿ, ತಾಲೂಕು ಪಂಚಾಯತಿ ಅಥವಾ ಪೌರ ನಿಗಮಗಳಂಥ ಸ್ಥಳೀಯ ಮಂಡಳಿಗಳು ಬಿಡುಗಡೆ ಮಾಡುವ ನಿಧಿಗಳು ಅಥವಾ ಶಾಲೆಯ ಪ್ರಯೋಜನಕ್ಕಾಗಿ ನಗದು ರೂಪದಲ್ಲಿ ಅಥವಾ ವಸ್ತು ರೂಪದಲ್ಲಿ ನೀಡುವ ಸಾರ್ವಜನಿಕ ವಂತಿಗೆಗಳು ಸೇರುತ್ತವೆ ;

ಡಬ್ಲ್ಯೂ. "ಉಪಾಧ್ಯಕ್ಷ" ಎಂದರೆ ಈ ನಿಯಮಗಳ ಅಡಿಯಲ್ಲಿ ನಿಯಮಿಸಲಾದ ಪ್ರಕ್ರಿಯೆಗಳ ಅನುಸಾರವಾಗಿ ಎಸ್‌ಡಿಎಂಸಿಯ ಸದಸ್ಯರಿಂದ ಆಯ್ಕೆಯಾದ ಎಸ್‌ಡಿಎಂಸಿಯ ಉಪಾಧ್ಯಕ್ಷ.

## ಅಧ್ಯಾಯ –II

## ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ/ ಜಂಟಿ ಸಮಿತಿ, ಸಾಮಾನ್ಯ ಸ್ಥಾಯಿ ಸಮಿತಿಯ ಪ್ರಕಾರ್ಯಗಳು ಮತ್ತು ಅಧಿಕಾರಗಳು

**3. ಶಾಲಾಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಎಸ್‌ಡಿಎಂಸಿ. ರಚನೆ.–** (1) ವಾರ್ಡ್ ಸಮಿತಿಯು ತನ್ನ ಪ್ರದೇಶದ ವ್ಯಾಪ್ತಿಯೊಳಗಿನ ಪ್ರತಿಯೊಂದು ಪ್ರಾಥಮಿಕ ಶಾಲೆಗಳಿಗಾಗಿ/ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯನ್ನು ತನ್ನ ಪ್ರದೇಶದ ವ್ಯಾಪ್ತಿಯೊಳಗಿನ ಪ್ರತಿಯೊಂದು ಪ್ರೌಢಶಾಲೆಗಳಿಗಾಗಿ ....... ಪೌರನಿಗಮಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯನ್ನು ರಚಿಸತಕ್ಕದ್ದು.

ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ/ಜಂಟಿ ಸಮಿತಿಯು ತನ್ನ ಪ್ರದೇಶದ ವ್ಯಾಪ್ತಿಯೊಳಗೆ ಪ್ರತಿಯೊಂದು ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗಾಗಿ ಒಂದು ಪೌರಸಭೆಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯನ್ನು ರಚಿಸತಕ್ಕದ್ದು.

ತಾಲ್ಲೂಕು ಪಂಚಾಯತ್ ಪ್ರದೇಶದ ವ್ಯಾಪ್ತಿಯೊಳಗೆ ಪ್ರತಿಯೊಂದು ಸರ್ಕಾರಿ ಪ್ರೌಢಶಾಲೆಗೆ ಒಂದು ತಾಲ್ಲೂಕು ಪಂಚಾಯತ್ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯನ್ನು ಸಾಮಾನ್ಯ ಸ್ಥಾಯೀ ಸಮಿತಿಯು ರಚಿಸತಕ್ಕದ್ದು.

ಇದು ಸದರಿ ಶಾಲೆಯ ಮುಖ್ಯ ಶಿಕ್ಷಕರಿಗೆ ಅಂಥ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ರಚನೆಯ ಕಾರ್ಯವನ್ನು ಪ್ರತ್ಯಾಯೋಜಿಸಲಾಗಿದೆ.

ಆದರೆ ಮುಖ್ಯ ಶಿಕ್ಷಕರು ಎಸ್ ಡಿಎಂಸಿಯ ನಿಗದಿತ ಅವಧಿಯು ಮುಗಿಯುವ ವೇಳೆಗೆ ಹೊಸ ಎಸ್ ಡಿಎಂಸಿಯ ರಚನೆಗಾಗಿ ಸಂಬಂದಿಸಿದ ಸ್ಥಾಯಿ ಸಮಿತಿಗೆ ಲಿಖಿತ ಮನವಿಯನ್ನು ಸಲ್ಲಿಸುವುದು. ಯಾವುದೇ ಕಾರಣಕ್ಕೆ ಸ್ಥಾಯಿ ಸಮಿತಿಗಳು ಶಾಲೆಯ ಅಸ್ತಿತ್ವದಲ್ಲಿರುವ ಎಸ್ ಡಿಎಂಸಿಯ ಅವಧಿಯು ಕೊನೆಗೊಳ್ಳುವ ಗರಿಷ್ಠ ಮೂವತ್ತು ದಿವಸಗಳೊಳಗೆ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣಾ ಸಮಿತಿಗಳನ್ನು ರಚಿಸುವ ಕಾರ್ಯವನ್ನು ಪ್ರತ್ಯಾಯೋಜಿಸಲು ವಿಫಲವಾದಲ್ಲಿ, ಆಗ ಶಾಲೆಯ ಮುಖ್ಯ ಶಿಕ್ಷಕರಿಗೆ ಆಯಾ ಶಾಲೆಯ ಶಾಲಾಭಿವೃದ್ಧಿ ಮತ್ತು ನಿರ್ವಹಣಾ ಸಮಿತಿಯನ್ನು ರಚಿಸುವ ಕಾರ್ಯದ ಅಧಿಕಾರವನ್ನು ನೀಡಲಾಗಿದೆ ಎಂದು ಭಾವಿಸಿ, ಸಮಿತಿ ರಚನೆ ಕಾರ್ಯವನ್ನು ಕೈಗೆತ್ತಿಕೊಳ್ಳತಕ್ಕದ್ದು.

(2) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಕೆಳಗೆ ನಿಯಮಿಸಲಾದ ರೀತಿಯಲ್ಲಿ ಮುಂದಿನ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು.

(i) ತಂದೆ ತಾಯಿಯರ ಪರಿಷತ್ತು, ತಮ್ಮ ಪೈಕಿ ಒಂಬತ್ತು ಜನ ಪ್ರತಿನಿಧಿಗಳನ್ನು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಗೆ ಆಯ್ಕೆ ಮಾಡತಕ್ಕದ್ದು. ಆ ಒಂಭತ್ತು ಜನ ಪ್ರತಿನಿಧಿಗಳಲ್ಲಿ, ಕನಿಷ್ಠ ಮೂರು ಜನ ಮಹಿಳೆಯರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಮುದಾಯದಿಂದ ತಲಾ ಒಬ್ಬರು, ಮತ್ತು ಅಲ್ಪಸಂಖ್ಯಾತ ಸಮುದಾಯದ ಒಬ್ಬ ಪ್ರತಿನಿಧಿಯನ್ನು ಒಳಗೊಂಡಿರತಕ್ಕದ್ದು. ಹಾಗೂ ಅವರ ಮಕ್ಕಳು ಆ ಶಾಲೆಯ ಬಿಟ್ಟ ಕೂಡಲೇ ಅವರ ಸದಸ್ಯತ್ವ ರದ್ದಾಗತಕ್ಕದ್ದು.

(ii) ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರು, ಆರೋಗ್ಯ ಕಾರ್ಯಕರ್ತೆ, ಮತ್ತು ಅಂಗನವಾಡಿ ಕಾರ್ಯಕರ್ತೆ, ಇವರು ಪದನಿಮಿತ್ತ ಸದಸ್ಯರಾಗಿರತಕ್ಕದ್ದು.

(iii) ಪ್ರೌಢ ಶಾಲೆಯಲ್ಲಿ ಮುಖ್ಯ ಶಿಕ್ಷಕರು / ಸಂಯುಕ್ತ ಪದವಿ ಪೂರ್ವ ಕಾಲೇಜಿನ ಉಪ ಪ್ರಾಂಶುಪಾಲರು, ಸ್ಥಳೀಯ ವೈದ್ಯಾಧಿಕಾರಿ ಇವರು ಪದನಿಮಿತ್ತ ಸದಸ್ಯರಾಗಿರತಕ್ಕದ್ದು.

(iv) ಸಾಧ್ಯವಿರುವ ಕಡೆಗಳಲ್ಲಿ, ಶಾಲೆಯ ಉನ್ನತ ತರಗತಿಯಿಂದ ಸಂಬಂಧಪಟ್ಟ ತರಗತಿಗಳ ವಿದ್ಯಾರ್ಥಿಗಳೇ ಆಯ್ಕೆ ಮಾಡಿದ ಇಬ್ಬರು ವಿದ್ಯಾರ್ಥಿಗಳು, ಎಂದರೆ ಒಬ್ಬ ವಿದ್ಯಾರ್ಥಿ ಮತ್ತು ಒಬ್ಬ ವಿದ್ಯಾರ್ಥಿನಿ ಇವರು ಶಾಲಾಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯಲ್ಲಿ ವಿದ್ಯಾರ್ಥಿಗಳ ಪ್ರತಿನಿಧಿಗಳಾಗಿರತಕ್ಕದ್ದು.

**ವಿವರಣೆ –** ಬಾಲಕರ ಶಾಲೆಯಾಗಿದ್ದಲ್ಲಿ, ಇಬ್ಬರು ಬಾಲಕ ಪ್ರತಿನಿಧಿಗಳು ಮತ್ತು ಬಾಲಕಿಯರ ಶಾಲೆಯಾಗಿದ್ದಲ್ಲಿ ಇಬ್ಬರು ಬಾಲಕಿಯರನ್ನು, ಉನ್ನತ ತರಗತಿಯಿಂದ ಆಯ್ಕೆ ಮಾಡಿಕೊಳ್ಳತಕ್ಕದ್ದು.

(3) (2) ನೇ ಉಪ–ಖಂಡದ ಅಡಿಯಲ್ಲಿ ನೇಮಕ ಮಾಡಲಾದ ವ್ಯಕ್ತಿಗಳು, ಈ ಮುಂದಿನ ವ್ಯಕ್ತಿಗಳು ಲಭ್ಯವಿರುವ ಕಡೆಗಳಲ್ಲಿ ಅಂಥವರನ್ನು ನಾಮ ನಿರ್ದೇಶನ ಮಾಡತಕ್ಕದ್ದು,–

(i). ಶಾಲಾ ವ್ಯಾಪ್ತಿಯಲ್ಲಿನ ಯುವಕ–ಯುವತಿ ಮಂಡಳಿಯಿಂದ ಅಥವಾ ಎಸ್‌ಹೆಚ್‌ಜಿ Self Help Group. ಯಿಂದ ಒಬ್ಬ ಪ್ರತಿನಿಧಿ ;

(ii). ಶಾಲಾ ವ್ಯಾಪ್ತಿಯಲ್ಲಿ ವಾಸವಾಗಿರುವ ಒಬ್ಬ ಶಿಕ್ಷಣ ತಜ್ಞ ಅಥವಾ ಶಾಲಾ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎನ್‌ಜಿಓ/ಎನ್‌ಪಿಓ ಪೈಕಿ ಒಬ್ಬ ಪ್ರತಿನಿಧಿ;

**ವಿವರಣೆ –** ಈ ಉಪಬಂಧದ ಉದ್ದೇಶಕ್ಕಾಗಿ, ಒಬ್ಬ ಶಿಕ್ಷಣತಜ್ಞ ಎಂದರೆ ಪದವಿಯನ್ನು ಪೂರ್ಣಗೊಳಿಸಿರುವ ಯಾವುದೇ ವ್ಯಕ್ತಿ. ಮತ್ತು ಇದು ಹಿಂದಿನ ಅಥವಾ ನಿವೃತ್ತ ಶಿಕ್ಷಕರನ್ನು ಒಳಗೊಳ್ಳುತ್ತದೆ.

(iii) ಪ್ರಾಥಮಿಕ ಶಾಲೆಗೆ ರೂ. 15,000/–ಗಳಿಗೆ ಸಮನಾದ ಅಥವಾ ಅದಕ್ಕಿಂತ ಅಧಿಕ ಮೌಲ್ಯ ಹೊಂದಿರುವ, ಜಮೀನನ್ನು ಅಥವಾ ನಗದು ವಸ್ತುವನ್ನು ಶಾಲೆಗೆ ನೀಡಿರುವ ದಾನಿ ;

(iv) ಪ್ರೌಢ ಶಾಲೆಗಳಿಗೆ ರೂ. 35,000–00 ಗಳಿಗೆ ಸಮನಾದ ಅಥವಾ ಅದಕ್ಕಿಂತ ಅಧಿಕ ಮೌಲ್ಯ ಹೊಂದಿರುವ, ಜಮೀನನ್ನು ಅಥವಾ ನಗದು ಅಥವಾ ವಸ್ತುವನ್ನು ಶಾಲೆಗೆ ನೀಡಿರುವ ಒಬ್ಬ ದಾನಿ.

**4. ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಗಳ ಮೇಲ್ವಿಚಾರಣೆ.–** ಪ್ರಾಥಮಿಕ ಶಾಲೆಗಳಿಗೆ ವಾರ್ಡ್ ಸಮಿತಿ/ ಪ್ರೌಢ ಶಾಲೆಗಳಿಗೆ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು / ಜಂಟಿ ಸಮಿತಿಯು ಅಥವಾ ತಾಲ್ಲೂಕು ಪಂಚಾಯಿತಿಯ ಸಾಮಾನ್ಯ ಸ್ಥಾಯಿ ಸಮಿತಿಯು ಅವುಗಳ ವ್ಯಾಪ್ತಿಯಲ್ಲಿ ಬರುವ ಶಾಲೆಯು,–

(1) ಕರ್ನಾಟಕ ಪೌರನಿಗಮಗಳ ಅಧಿನಿಯಮದ 58ನೇ ಪ್ರಕರಣದ (14) ಮತ್ತು (30)ನೇ ಖಂಡದಲ್ಲಿ ಹಾಗೂ 13ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಪ್ರಕಾರ್ಯಗಳು ಮುಂದುವರಿಕೆಯಾಗಿ, ಈ ಸಂಬಂಧದಲ್ಲಿ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಕೈಗೊಂಡ ಕ್ರಮಗಳನ್ನು ಪರಿಶೀಲನೆ ಮಾಡತಕ್ಕದ್ದು.

(2) "ಮಹಾನಗರ ಪ್ರದೇಶ"ದ ವ್ಯಾಪ್ತಿಯೊಳಗಿನ ಶಾಲೆಗಳ ವಾರ್ಷಿಕ ಕಾಮಗಾರಿ ಯೋಜನೆಗಳ ಅನುಷ್ಠಾನವನ್ನು ನಿಯತವಾಗಿ ಪರಿಶೀಲನೆ ಮಾಡತಕ್ಕದ್ದು ಮತ್ತು ಸಾಧ್ಯವಿರುವ ಕಡೆಗಳಲ್ಲಿ ಅವುಗಳ ಅನುಷ್ಠಾನಕ್ಕೆ ಅಗತ್ಯ ನೆರವು ನೀಡತಕ್ಕದ್ದು.

(3) ಕರ್ನಾಟಕ ಪೌರ ಸಭೆಗಳ ಅಧಿನಿಯಮದ 63ನೇ ಪ್ರಕರಣದಲ್ಲಿ (1)ನೇ ಉಪ–ಪ್ರಕರಣದ (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಲಾದ ಪ್ರಕಾರ್ಯಗಳು ಮುಂದುವರಿಕೆಯಾಗಿ, ಈ ಸಂಬಂಧದಲ್ಲಿ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಕೈಗೊಂಡ ಕ್ರಮಗಳನ್ನು ಪರಿಶೀಲನೆ ಮಾಡತಕ್ಕದ್ದು.

(4) "ಪೌರಸಭೆ ಪ್ರದೇಶ"ದ ವ್ಯಾಪ್ತಿಯೊಳಗಿನ ಶಾಲೆಗಳ ವಾರ್ಷಿಕ ಕಾಮಗಾರಿ ಯೋಜನೆಗಳ ಅನುಷ್ಠಾನವನ್ನು ನಿಯತವಾಗಿ ಪರಿಶೀಲನೆ ಮಾಡತಕ್ಕದ್ದು ಮತ್ತು ಸಾಧ್ಯವಿರುವ ಕಡೆಗಳಲ್ಲಿ ಅವುಗಳ ಅನುಷ್ಠಾನಕ್ಕೆ ಅಗತ್ಯ ನೆರವು ನೀಡತಕ್ಕದ್ದು.

(5) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಅನುಸೂಚಿ II ರ XIV ನೇ ಖಂಡದಲ್ಲಿ ನಿರ್ದಿಷ್ಟಪಡಿಸಲಾದ ಪ್ರಕಾರ್ಯಗಳು ಮುಂದುವರಿಕೆಯಾಗಿ, ಈ ಸಂಬಂಧದಲ್ಲಿ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಕೈಗೊಂಡ ಕ್ರಮಗಳನ್ನು ಪರಿಶೀಲನೆ ಮಾಡತಕ್ಕದ್ದು.

(6) "ತಾಲ್ಲೂಕು ಪಂಚಾಯತ್ ಪ್ರದೇಶ"ದ ವ್ಯಾಪ್ತಿಯೊಳಗಿನ ಪ್ರೌಢಶಾಲೆಗಳ ವಾರ್ಷಿಕ ಕಾಮಗಾರಿ ಯೋಜನೆಗಳ ಅನುಷ್ಠಾನವನ್ನು ನಿಯತವಾಗಿ ಪರಿಶೀಲನೆ ಮಾಡತಕ್ಕದ್ದು ಮತ್ತು ಸಾಧ್ಯವಿರುವ ಕಡೆಗಳಲ್ಲಿ ಅವುಗಳ ಅನುಷ್ಠಾನಕ್ಕೆ ಅಗತ್ಯ ನೆರವು ನೀಡತಕ್ಕದ್ದು.

(7) ಮಾಹಿತಿ ವಿನಿಮಯ ಮತ್ತು ಸಮನ್ವಯತೆಯ ಉದ್ದೇಶಕ್ಕಾಗಿ ಶೈಕ್ಷಣಿಕ ವರ್ಷದಲ್ಲಿ ಕನಿಷ್ಠ ಪಕ್ಷ ಪ್ರತಿ ಮೂರು ತಿಂಗಳಿಗೊಮ್ಮೆ

(i) ಮಹಾನಗರ ಪಾಲಿಕೆ ಪ್ರತಿ ವಾರ್ಡ್ ವ್ಯಾಪ್ತಿಯಲ್ಲಿರುವ ಎಲ್ಲಾ ಪ್ರಾಥಮಿಕ ಶಾಲೆಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪದಾಧಿಕಾರಿಗಳ ಜಂಟಿ ಸಭೆಯನ್ನು ವಾರ್ಡ್ ಸಮಿತಿ ನಡೆಸತಕ್ಕದ್ದು.

(ii) ಹಾಗೆಯೇ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವ ಎಲ್ಲಾ ಪ್ರೌಢ ಶಾಲೆಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪದಾಧಿಕಾರಿಗಳ ಜಂಟಿ ಸಭೆಯನ್ನು ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು ನಡೆಸತಕ್ಕದ್ದು.

(iii) ಪೌರಸಭೆ ಪ್ರದೇಶದ ವ್ಯಾಪ್ತಿಯಲ್ಲಿರುವ ಎಲ್ಲಾ ಪ್ರಾಥಮಿಕ ಶಾಲೆಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪದಾಧಿಕಾರಿಗಳ ಜಂಟಿ ಸಭೆಯನ್ನು ನಡೆಸತಕ್ಕದ್ದು. ಹಾಗೆಯೇ ಪ್ರೌಢಶಾಲೆಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪದಾಧಿಕಾರಿಗಳ ಜಂಟಿ ಸಭೆಯನ್ನು ಪ್ರತ್ಯೇಕವಾಗಿ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು/ಜಂಟಿ ಸಮಿತಿಯು ನಡೆಸತಕ್ಕದ್ದು.

(iv) ತಾಲ್ಲೂಕು ಪಂಚಾಯತ್ ಪ್ರದೇಶದ ವ್ಯಾಪ್ತಿಯಲ್ಲಿರುವ ಎಲ್ಲಾ ಪ್ರೌಢ ಶಾಲೆಗಳ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪದಾಧಿಕಾರಿಗಳ ಜಂಟಿ ಸಭೆಯನ್ನು ಸಾಮಾನ್ಯ ಸ್ಥಾಯಿ ಸಮಿತಿಯು ನಡೆಸತಕ್ಕದ್ದು.

**5. ನಿಧಿಗಳ ಸಕಾಲಿಕ ಹಂಚಿಕೆ.**–(1) ಮಹಾನಗರ ಪಾಲಿಕೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಮತ್ತು ಪುರಸಭೆ/ ನಗರಸಭೆ/ ಪಟ್ಟಣ ಪಂಚಾಯಿತಿಯು ಹಾಗೂ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಶಾಲೆಯ ಶಿಕ್ಷಣಕ್ಕಾಗಿ ಮತ್ತು ಶಾಲೆಯ ಮೂಲಭೂತ ಸೌಕರ್ಯಗಳಿಗಾಗಿ, ತಾನು ಸ್ವೀಕರಿಸಿದ ಎಲ್ಲಾ ನಿಧಿಗಳನ್ನು, ಸ್ವೀಕರಿಸಿದ ಒಂದು ವಾರದೊಳಗೆ ಶಾಲೆಯ ಎಸ್‌ಡಿಎಂಸಿ ಖಾತೆಗೆ ವರ್ಗಾಯಿಸತಕ್ಕದ್ದು.

(2) ಪೌರ ನಿಗಮದ ಪ್ರದೇಶದ ವ್ಯಾಪ್ತಿಯೊಳಗಿನ ಶಾಲೆಗಳ ಅಗತ್ಯಕ್ಕೆ ತಕ್ಕಂತೆ ಮಹಾನಗರ ಪಾಲಿಕೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಮತ್ತು ಪೌರಸಭಾ ಪ್ರದೇಶದ ವ್ಯಾಪ್ತಿಯೊಳಗಿನ ಶಾಲೆಗಳ ಅಗತ್ಯಕ್ಕೆ ತಕ್ಕಂತೆ ಪುರಸಭೆ/ನಗರಸಭೆ/ಪಟ್ಟಣ ಪಂಚಾಯಿತಿಯು ಹಾಗೂ ತಾಲ್ಲೂಕು ಪಂಚಾಯತ್ ಪ್ರದೇಶದ ವ್ಯಾಪ್ತಿಯೊಳಗಿನ ಶಾಲೆಗಳ ಅಗತ್ಯಕ್ಕೆ ತಕ್ಕಂತೆ ತಾಲ್ಲೂಕು ಪಂಚಾಯತ್ ನ ಸಾಮಾನ್ಯ ಸ್ಥಾಯಿ ಸಮಿತಿಯು ಶಾಲೆಗಳ ಎಸ್‌ಡಿಎಂಸಿ ಖಾತೆಗೆ ಹೆಚ್ಚುವರಿ ನಿಧಿಗಳನ್ನು ವರ್ಗಾಯಿಸಬಹುದು.

## ಅಧ್ಯಾಯ– III

## ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪ್ರಕಾರ್ಯಗಳು

**6. ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿ (ಎಸ್‌ಡಿಎಂಸಿ)ಯ ಪದಾಧಿಕಾರಿಗಳ ಆಯ್ಕೆ.**– (1) ಆಯಾ ಕ್ಷೇತ್ರದ ಶಾಸಕರು ಅಥವಾ ಶಾಸಕರಿಂದ ನಾಮನಿರ್ದೇಶಿತ ವ್ಯಕ್ತಿ ಶಾಲಾಭಿವೃದ್ಧಿ ಮತ್ತು ನಿರ್ವಹಣಾ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು. ಉಪಾಧ್ಯಕ್ಷರನ್ನು ತಂದೆ ತಾಯಿಯರ ಪರಿಷತ್ತಿನ ಪ್ರತಿನಿಧಿಗಳಾಗಿರುವ ಸದಸ್ಯರ ಪೈಕಿ ಒಬ್ಬರನ್ನು ಆಯ್ಕೆ ಮಾಡತಕ್ಕದ್ದು.

(2) ಶಾಲೆಯ ಮುಖ್ಯ ಶಿಕ್ಷಕರು ಅಥವಾ ಆಕೆಯ/ಆತನ ಗೈರುಹಾಜರಿಯಲ್ಲಿ ಶಾಲೆಯ ಸೇವಾ ಜೇಷ್ಠತೆಯ ಶಿಕ್ಷಕರನ್ನು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿ ನೇಮಿಸತಕ್ಕದ್ದು.

(3) ಅಧ್ಯಕ್ಷ ಮತ್ತು ಉಪಾಧ್ಯಕ್ಷರು ಮೂರು ವರ್ಷಗಳ ಅವಧಿಗೆ ಅಥವಾ ಅವನು/ಅವಳು ಸದಸ್ಯರಾಗಿರುವುದು ರದ್ದಾಗುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಧಿಕಾರವನ್ನು ಹೊಂದಿರತಕ್ಕದ್ದು.

**7. ಅಧ್ಯಕ್ಷರ ಪ್ರಕಾರ್ಯಗಳು.**– (1) ಅಧ್ಯಕ್ಷರು ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು,–

(i) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಅಧ್ಯಕ್ಷರಾಗಿ ಸಭೆಗಳ ಅಧ್ಯಕ್ಷತೆ ವಹಿಸುವುದು;

(ii) ದೂರುಗಳ ಪೆಟ್ಟಿಗೆಯನ್ನು ಆ ಸಮಯದಲ್ಲಿ ಅಲ್ಲಿ ಲಭ್ಯವಿರುವ ಕನಿಷ್ಟ ಒಬ್ಬ ಶಿಕ್ಷಕ ಮತ್ತು ವಿದ್ಯಾರ್ಥಿಯ ಉಪಸ್ಥಿತಿಯಲ್ಲಿ ಕನಿಷ್ಠ ವಾರಕ್ಕೊಮ್ಮೆ, ತೆರೆಯುವುದು.

(2) ಅಧ್ಯಕ್ಷರು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಮಾರ್ಗದರ್ಶನ ನೀಡುವಂಥ ಇತರೆ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

**8. ಉಪಾಧ್ಯಕ್ಷರ ಪ್ರಕಾರ್ಯಗಳು.–** (1) ಅಧ್ಯಕ್ಷರ ಗೈರುಹಾಜರಿಯಲ್ಲಿ, ಉಪಾಧ್ಯಕ್ಷರು ಈ ನಿಯಮಗಳ 7ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದಂತೆ ಅಧ್ಯಕ್ಷರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(2) ಉಪಾಧ್ಯಕ್ಷರು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಮಾರ್ಗದರ್ಶನ ನೀಡುವಂಥ ಇತರ ಎಲ್ಲಾ ಕಾರ್ಯಗಳನ್ನು ಸಹ ನಿರ್ವಹಿಸತಕ್ಕದ್ದು.

**9. ಸದಸ್ಯ ಕಾರ್ಯದರ್ಶಿಯ ಪ್ರಕಾರ್ಯಗಳು.–** (1) ಸದಸ್ಯ ಕಾರ್ಯದರ್ಶಿಯು ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು,–

(i) ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭಕ್ಕೆ ಕನಿಷ್ಠ ಒಂದು ತಿಂಗಳ ಮೊದಲು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಅನುಮೋದನೆ ಪಡೆದು ವಾರ್ಷಿಕ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸುವುದು; ಮತ್ತು ಅದನ್ನು ಸಿದ್ಧಪಡಿಸಿದ ಒಂದು ವಾರದೊಳಗೆ

(ಎ) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಗೆ ಸಲ್ಲಿಸತಕ್ಕದ್ದು.

(ಬಿ) ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯಸಮಿತಿ/ಜಂಟಿ ಸಮಿತಿಗೆ ಸಲ್ಲಿಸತಕ್ಕದ್ದು.

(ಸಿ) ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್ ಸಾಮಾನ್ಯ ಸ್ಥಾಯಿ ಸಮಿತಿಗೆ ಸಲ್ಲಿಸತಕ್ಕದ್ದು.

(ii) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಭೆಗೆ ಕಾರ್ಯಸೂಚಿ ತಯಾರಿಸುವುದು.

**ವಿವರಣೆ–** ಸಭೆಗಳ ಕಾರ್ಯಸೂಚಿಯು ಶಾಲೆಯು ಮತ್ತು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಮಾಸಿಕ ಲೆಕ್ಕಪತ್ರಗಳು, ಶಾಲಾ ಅಭಿವೃದ್ಧಿ, ಆಡಳಿತ, ಹಾಜರಾತಿ, ದಾಖಲಾತಿ, ಮಕ್ಕಳನ್ನು ಶಾಲೆಯಲ್ಲಿ ಉಳಿಸಿಕೊಳ್ಳುವುದು ಮತ್ತು ಅವರ ಶೈಕ್ಷಣಿಕ ಸಾಧನೆಗೆ ಸಂಬಂಧಿಸಿದ ಅಂಶಗಳನ್ನು ಒಳಗೊಂಡಿರತಕ್ಕದ್ದು.

(iii) ಅಧ್ಯಾಯ IV ರ ಅನುಸಾರ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಭೆ ಕರೆಯುವುದು ಮತ್ತು ಅದಕ್ಕೆ ಅನುಕೂಲ ಕಲ್ಪಿಸಿಕೊಡುವುದು ಮತ್ತು ಎಲ್ಲಾ ಸಭೆಗಳ ನಡವಳಿಗಳನ್ನು ತೆಗೆದುಕೊಳ್ಳುವುದು.

(iv) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಮಾಹಿತಿಗಾಗಿ ಆತನ/ಆಕೆಯ ಅಧಿಕಾರದ ಅಡಿಯಲ್ಲಿ ಬರುವ ಎಲ್ಲ ವಿಷಯಗಳ ಮಾಹಿತಿಯನ್ನು ತಯಾರಿಸುವುದು.

(v) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಲೆಕ್ಕಪತ್ರಗಳು ಮತ್ತು ದಾಖಲೆಗಳನ್ನು ಇಟ್ಟುಕೊಳ್ಳುವುದು.

(vi) ಆತನ/ಆಕೆಯ ಪ್ರಭಾರದಲ್ಲಿರುವ ಶಾಲೆಗೆ ಸೇರಿರುವ ಎಲ್ಲ ದಸ್ತಾವೇಜುಗಳು ಮತ್ತು ಸ್ವತ್ತಿನ ಸುರಕ್ಷಿತ ಸುಪರ್ದಿಗೆ ಜವಾಬ್ದಾರರಾಗಿರುವುದು.

(vii) ಕನಿಷ್ಠಪಕ್ಷ, ಪ್ರತಿ ಮೂರು ತಿಂಗಳುಗಳಿಗೊಮ್ಮೆ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣಾ ಸಮಿತಿಯ ಚಟುವಟಿಕೆಗಳ ವರದಿ ಮತ್ತು ಲೆಕ್ಕಪತ್ರಗಳ ವಿವರಪಟ್ಟಿಯನ್ನು ತಯಾರಿಸುವುದು; ಹಾಗೂ

(ಎ) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ತಂದೆ ತಾಯಿಯರ ಪರಿಷತ್ತು ಮತ್ತು ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಗೆ ಹಾಜರುಪಡಿಸುವುದು.

(ಬಿ) ಪೌರ ಸಭೆಗಳಿಗೆ ಸಂಬಂಧಿಸಿದಂತೆ ತಂದೆ ತಾಯಿಯರ ಪರಿಷತ್ತು ಮತ್ತು ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿಗೆ ಹಾಜರುಪಡಿಸುವುದು.

(ಸಿ) ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಂದೆ ತಾಯಿಯರ ಪರಿಷತ್ತು ಮತ್ತು ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ಹಾಜರುಪಡಿಸುವುದು.

(viii) ಪತ್ರವ್ಯವಹಾರ ನಡೆಸುವುದು ಹಾಗೂ ಎಲ್ಲಾ ನೋಟೀಸುಗಳನ್ನು ಮತ್ತು ಜಾಹೀರಾತುಗಳನ್ನು ಹೊರಡಿಸುವುದು.

(2) ಸದಸ್ಯ ಕಾರ್ಯದರ್ಶಿಗಳು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಮಾರ್ಗದರ್ಶನ ನೀಡುವಂಥ ಇತರ ಎಲ್ಲಾ ಕಾರ್ಯಗಳನ್ನು ಸಹ ನಿರ್ವಹಿಸತಕ್ಕದ್ದು.

**10. ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ಈ ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸುವುದು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಕರ್ತವ್ಯವಾಗಿರತಕ್ಕದ್ದು, ಎಂದರೆ–

ಎ. ಶಾಲೆಯ ವಾರ್ಷಿಕ ಕ್ರಿಯಾ ಯೋಜನೆಯ ತಯಾರಿಯಲ್ಲಿ ಸದಸ್ಯ–ಕಾರ್ಯದರ್ಶಿಗೆ ಮಾರ್ಗದರ್ಶನ ನೀಡುವುದು ಮತ್ತು ಪ್ರತಿ ಶೈಕ್ಷಣಿಕ ವರ್ಷ ಪ್ರಾರಂಭವಾಗುವುದಕ್ಕೆ ಕನಿಷ್ಠ ಒಂದು ತಿಂಗಳು ಮೊದಲು ಅದನ್ನು ಅನುಮೋದಿಸುವುದು.

ಬಿ. ಶಿಕ್ಷಕರು, ಬೋಧಕೇತರ ಸಿಬ್ಬಂದಿ ಹಾಗೂ ವಿದ್ಯಾರ್ಥಿಗಳ ಕ್ರಮಬದ್ಧ ಹಾಗೂ ಸಕಾಲಿಕ ಹಾಜರಾತಿಯನ್ನು ನಿಯತವಾಗಿ ಮೇಲ್ವಿಚಾರಣೆ ಮಾಡುವುದು ಹಾಗೂ ಪರಿಶೀಲಿಸುವುದು. ಈ ಉದ್ದೇಶಕ್ಕಾಗಿ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು, ಹಾಜರಾತಿ ಪುಸ್ತಕಗಳನ್ನು ನಿರ್ವಹಿಸಿಕೊಂಡು ಬರುವಂತೆ ಶಾಲೆಯನ್ನು ಅಗತ್ಯಪಡಿಸಬಹುದು. ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಯಾವುದೇ ಸದಸ್ಯರು ಶಾಲೆಯಲ್ಲಿ ನಿರ್ವಹಿಸಿರುವ ಎಲ್ಲ ಹಾಜರಾತಿ ಪುಸ್ತಕಗಳನ್ನು ಪರಿಶೀಲಿಸುವ ಅಧಿಕಾರ ಹೊಂದಿರುತ್ತಾರೆ.

ಸಿ. ಧರ್ಮ, ಜನಾಂಗ, ಲಿಂಗ ಭಾಷೆ, ಹುಟ್ಟಿದ ಸ್ಥಳ ಇವು ಯಾವುದನ್ನೂ ಪರಿಗಣನೆಗೆ ತೆಗೆದುಕೊಳ್ಳದೇ ಶಾಲಾ ವ್ಯಾಪ್ತಿಯಲ್ಲಿರುವ ಶಾಲೆಗೆ ಹೋಗದ ಎಲ್ಲ ಮಕ್ಕಳು ಶಾಲೆಗೆ ದಾಖಲಾಗುವುದನ್ನು ಖಚಿತಪಡಿಸುವುದು. ಇದಕ್ಕಾಗಿ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಹೆಣ್ಣುಮಕ್ಕಳು, ವಿಶೇಷ ಅಗತ್ಯವುಳ್ಳ ಮಕ್ಕಳು, ಬಾಲಕಾರ್ಮಿಕರು ಹಾಗೂ ಅವರ ತಂದೆತಾಯಿಯರಿಗಾಗಿ ದಾಖಲಾತಿ ಆಂದೋಲನ, ಸೇತುಬಂಧ ಕಾರ್ಯಕ್ರಮಗಳು ಮತ್ತು ವಿಶೇಷ ಪ್ರಚಾರಾಂದೋಲನವನ್ನು ನಡೆಸಬಹುದು.

ಡಿ. ಶಾಲಾ ವ್ಯಾಪ್ತಿಯಲ್ಲಿರುವ ದೈಹಿಕ ಅಥವಾ ಮಾನಸಿಕ ಸವಾಲುಗಳುಳ್ಳ ಮಕ್ಕಳ ವಿರುದ್ಧ ತಾರತಮ್ಯ ನಡೆಯದಿರುವುದನ್ನು ಖಚಿತಪಡಿಸುವುದು ಹಾಗೂ ಅವರು ಶಾಲೆಗೆ ಹಾಜರಾಗಲು ಸಮರ್ಥರಾಗುವಂತೆ ಶ್ರವಣ ಸಾಧನಗಳು, ಬ್ರೇಲ್ ಮುಂತಾದ ವಿಶೇಷ ಸೌಲಭ್ಯಗಳನ್ನು ಒದಗಿಸುವುದು.

ಇ. ಶಾಲೆಯಿಂದ ಹೊರಗುಳಿದ ಮಕ್ಕಳ ಪ್ರಮಾಣವನ್ನು ನಿಯತಕಾಲಿಕವಾಗಿ ಮೇಲ್ವಿಚಾರಣೆ ಮಾಡುವುದು ಮತ್ತು ಶಾಲೆಯಲ್ಲಿರುವ ಎಲ್ಲ ಮಕ್ಕಳ ಹಾಜರಾತಿಯ ಬಗ್ಗೆ ಹಾಗೂ ಅವರನ್ನು ಶಾಲೆಯಲ್ಲೇ ಉಳಿಸಿಕೊಳ್ಳುವ ಬಗ್ಗೆ ಖಚಿತಪಡಿಸಿ ಕೊಳ್ಳುವುದು. ಈ ಉದ್ದೇಶಕ್ಕಾಗಿ ಶಾಲಾಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಉಚಿತ ಪಠ್ಯ ಪುಸ್ತಕಗಳು, ಮಧ್ಯಾಹ್ನ ಬಿಸಿ ಊಟ, ಸಮವಸ್ತ್ರ ಮತ್ತು ವಿದ್ಯಾರ್ಥಿ ವೇತನಗಳು ಮುಂತಾದ ಪ್ರೋತ್ಸಾಹಕಗಳ ವಿತರಣೆಯನ್ನು ಖಚಿತಪಡಿಸಿಕೊಳ್ಳುವುದು ಮತ್ತು ಅವುಗಳ ವಿತರಣೆಯ ಮೇಲ್ವಿಚಾರಣೆ ಮಾಡತಕ್ಕದ್ದು. ಇತರ ಎಲ್ಲಾ ಸರ್ಕಾರಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.

ಎಫ್. ಕನಿಷ್ಠಪಕ್ಷ ಮೂರು ತಿಂಗಳುಗಳಿಗೊಮ್ಮೆ ತಂದೆತಾಯಿಯರ ಪರಿಷತ್ತಿನ ಸಭೆಗಳನ್ನು ಕರೆಯುವುದು.

ಜಿ. ಶಾಲೆಗೆ ಮಕ್ಕಳನ್ನು ಕಳುಹಿಸಲು ವಿಫಲರಾಗುವ ತಂದೆತಾಯಿಗಳಿಗಾಗಿ ಸಭೆಗಳನ್ನು ನಿಯತಕಾಲಿಕವಾಗಿ ನಡೆಸುವುದು. ಅವರ ಮನೆಗಳಿಗೆ ಭೇಟಿ ಕೊಟ್ಟು ಆ ಮಕ್ಕಳ ದಾಖಲಾತಿ ಖಾತರಿ ಪಡಿಸುವುದು.

ಹೆಚ್. ಶಾಲೆಯಲ್ಲಿ ಸಂಪೂರ್ಣ ನೈರ್ಮಲ್ಯ, ಸುಸ್ಥಿತಿ ಮತ್ತು ಉತ್ತಮ ನಿರ್ವಹಣೆಯಿರುವಂತೆ ನೋಡಿಕೊಳ್ಳುವುದು. ಶಾಲೆಗೆ ಸಂಬಂಧಿಸಿದ ಆಸ್ತಿಗಳ ದಾಖಲೆ ಪತ್ರಗಳನ್ನು ನಿರ್ವಹಿಸುವುದು.

ಐ. ಆಟದ ಮೈದಾನ, ಆವರಣ ಗೋಡೆಗಳು, ಕೊಠಡಿಗಳು, ಶೌಚಾಲಯ, ಪೀಠೋಪಕರಣ, ಕುಡಿಯುವ ನೀರಿನ ಸೌಲಭ್ಯ ಮುಂತಾದ ಮೂಲಸೌಕರ್ಯಗಳು ಹಾಗೂ ಶಾಲೆಗೆ ಅವಶ್ಯವಿರುವ ಇತರ ಸೌಕರ್ಯಗಳನ್ನು ಹೆಚ್ಚಿಸಲು ನೆರವು ನೀಡುವುದು. ಇದಕ್ಕಾಗಿ, ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಯಾವುದೇ ಕಟ್ಟಡಗಳ ಅಥವಾ ಕಾಮಗಾರಿಗಳ ನಿರ್ಮಾಣ, ನಿರ್ವಹಣೆ, ಮಾರ್ಪಾಡು, ಸುಧಾರಣೆ ಅಥವಾ ಅಭಿವೃದ್ಧಿಯನ್ನು ಕೈಗೊಳ್ಳಬಹುದು.

ಜೆ. ಈ ನಿಯಮಗಳ 10ನೇ ನಿಯಮದ ಅಡಿಯಲ್ಲಿ ಅದರ ಯಾವುದೇ/ಕೆಲವು ಅಥವಾ ಎಲ್ಲ ಪ್ರಕಾರ್ಯಗಳ ಮುಂದುವರಿಕೆಗೆ ಅವಶ್ಯಕವೆನಿಸುವ ಅಥವಾ ಅನುಕೂಲಕರವೆನಿಸುವ ಸ್ಥಿರ ಅಥವಾ ಚರ ಸ್ವತ್ತು ಅಥವಾ ಯಾವುದೇ ಹಕ್ಕುಗಳು ಅಥವಾ ವಿಶೇಷ ಸೌಲಭ್ಯಗಳನ್ನು ಅರ್ಜಿಸುವುದು, ಖರೀದಿಸುವುದು ಅಥವಾ ಅನ್ಯಥಾ ಸ್ವಂತವಾಗಿ ಹೊಂದುವುದು ಅಥವಾ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಗುತ್ತಿಗೆಗೆ ಅಥವಾ ಬಾಡಿಗೆಗೆ ಪಡೆಯುವುದು.

ಕೆ. ಸ್ವಯಿಚ್ಛೆಯ ಮೇರೆಗೆ ಅಥವಾ ಶಾಲಾನಿಧಿಗಳಿಂದ ವೆಚ್ಚವನ್ನು ಭರಿಸಿ, ನಿಗದಿಪಡಿಸಿದ ಸಂಭಾವನೆಯನ್ನು ಸಂದಾಯ ಮಾಡುವ ಮೂಲಕ, ಅವಶ್ಯವಿರುವೆಡೆ, ಸಂದರ್ಭಾನುಸಾರ, ಶಿಕ್ಷಕರಾಗಿ ಅಥವಾ ಬೋಧಕರಾಗಿ

ಸ್ಥಳೀಯ ವ್ಯಕ್ತಿಗಳ ಸೇವೆಗಳನ್ನು ಪಡೆಯುವುದು. ಪರಂತು, ನಿಯತ ಹುದ್ದೆಯನ್ನು ಈ ರೀತಿಯಲ್ಲಿ ಖಾಯಂ ಆಗಿ ಭರ್ತಿ ಮಾಡಬಾರದು.

ಎಲ್. ವರ್ಷದಲ್ಲಿ ಕನಿಷ್ಠ ಪಕ್ಷ ಇನ್ನೂರ ಇಪ್ಪತ್ತು ಬೋಧನಾ ದಿನಗಳನ್ನು ಖಚಿತಪಡಿಸುವುದು.

ಎಂ. ಶಿಕ್ಷಕರ ಸಾಧನೆಯನ್ನು ನಿಯತಕಾಲಿಕವಾಗಿ ಅವಲೋಕಿಸುವುದು ಮತ್ತು ಸರ್ವ ಶಿಕ್ಷಣ ಅಭಿಯಾನ ಅಥವಾ ಕಾಲಕಾಲಕ್ಕೆ ಅನ್ವಯವಾಗುವಂಥ ಕೇಂದ್ರ ಅಥವಾ ರಾಜ್ಯ ಸರ್ಕಾರದ ಯಾವುದೇ ಇತರ ಕಾರ್ಯಕ್ರಮದ ಅಡಿಯಲ್ಲಿ ಗೊತ್ತುಪಡಿಸಿದ ಕನಿಷ್ಠ ಅರ್ಹತಾ ಮಾನದಂಡಗಳನ್ನು ಪಾಲಿಸುವಂತೆ ಮಾಡುವುದು.

ಎನ್. ಶಿಕ್ಷಕರ ಮತ್ತು ಮುಖ್ಯ ಶಿಕ್ಷಕರ ಬೇಡಿಕೆಯನ್ನು ಆಧರಿಸಿ ಶಿಕ್ಷಕರಿಗೆ ಅವಶ್ಯಕತೆಯಾಧಾರಿತ ತರಬೇತಿಗಳನ್ನು ಒದಗಿಸಲು ಅನುಕೂಲ ಕಲ್ಪಿಸುವುದು.

ಒ. ವಿದ್ಯಾರ್ಥಿಗಳ ಸಾಧನೆಯನ್ನು ನಿಯತಕಾಲಿಕವಾಗಿ ಅವಲೋಕಿಸುವುದು ಮತ್ತು ಎನ್‌ಸಿಇಆರ್‌ಟಿ ಮತ್ತು ರಾಜ್ಯ ಸರ್ಕಾರವು ಗೊತ್ತುಪಡಿಸಿದ ಮಾನದಂಡಗಳನ್ನು ಪಾಲಿಸುವಂತೆ ನೋಡಿಕೊಳ್ಳುವುದು.

ಪಿ. ಶಾಲೆಯಲ್ಲಿ ಆರೋಗ್ಯ ಕಾರ್ಯಕ್ರಮಗಳನ್ನು ನಿಯತವಾಗಿ ಅವಲೋಕಿಸುವುದು ಮತ್ತು ಮೇಲ್ವಿಚಾರಣೆ ನಡೆಸುವುದು ಮತ್ತು ಮಕ್ಕಳಿಗಾಗಿ ಕ್ರಮಬದ್ಧವಾಗಿ ಆರೋಗ್ಯ ಶಿಬಿರಗಳನ್ನು ನಡೆಸಲು ನೆರವು ನೀಡುವುದು.

ಕ್ಯೂ. ಶಾಲೆಯ ಮತ್ತು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಎಲ್ಲ ಸ್ವತ್ತುಗಳು, ನಿಧಿಗಳು ಮತ್ತು ಹಣಕಾಸಿನ ಮೇಲ್ವಿಚಾರಣೆ ನಡೆಸುವುದು.

ಆರ್. ಈ ನಿಯಮಗಳ 10ನೇ ನಿಯಮದ ಅಡಿಯಲ್ಲಿನ ಅದರ ಪ್ರಕಾರ್ಯಗಳ ಮುಂದುವರಿಕೆಗೆ ಹಣ ಮತ್ತು ನಿಧಿಗಳನ್ನು ಪಡೆಯಲು ಮನವಿಗಳು ಮತ್ತು ಅರ್ಜಿಗಳನ್ನು ನೀಡುವುದು ಹಾಗೂ ನಗದು ರೂಪದಲ್ಲಿ ಯಾವುದೇ ದಾನಗಳು ಅಥವಾ ದೇಣಿಗೆಗಳು, ಭದ್ರತೆಗಳು ಅಥವಾ ಚರ ಅಥವಾ ಸ್ಥಿರ ರೂಪದಲ್ಲಿ ಯಾವುದೇ ಸ್ವತ್ತನ್ನು ಸ್ವೀಕರಿಸುವುದು, ಸಂಗ್ರಹಿಸುವುದು ಮತ್ತು ಅಂಗೀಕರಿಸುವುದು ಮತ್ತು ಅದರ ಸದರಿ ಎಲ್ಲ ಅಥವಾ ಯಾವುದೇ ಪ್ರಕಾರ್ಯಗಳ ಈಡೇರಿಕೆಗಾಗಿ ಅದನ್ನು ಖರ್ಚು ಮಾಡುವುದು. ಈ ಉಪ–ಖಂಡದಲ್ಲಿರುವುದು ಯಾವುದನ್ನು ತಂದೆತಾಯಿಗಳಿಂದ ಆಜ್ಞಾರೂಪದ ದೇಣಿಗೆಯನ್ನು ಅಧಿಕೃತವಾಗಿ ಸಂಗ್ರಹಿಸುವುದು ಎಂದು ಅರ್ಥೈಸತಕ್ಕದ್ದಲ್ಲ.

ಎಸ್. ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ತನ್ನ ಕಾರ್ಯವನ್ನು ಅವಲೋಕಿಸುವುದು ಮತ್ತು ಈ ಬಗ್ಗೆ ಕನಿಷ್ಠ ಪಕ್ಷ ಮೂರು ತಿಂಗಳುಗಳಿಗೊಮ್ಮೆ ತಂದೆ ತಾಯಿಯರ ಪರಿಷತ್ತು ಮತ್ತು;

(i) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಗೆ ವರದಿ ಸಲ್ಲಿಸತಕ್ಕದ್ದು.

(ii) ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿಗೆ ವರದಿ ಸಲ್ಲಿಸತಕ್ಕದ್ದು.

(iii) ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ವರದಿ ಸಲ್ಲಿಸತಕ್ಕದ್ದು.

ಟಿ. ಶಾಲಾ ಕಾರ್ಯಚಟುವಟಿಕೆಗಳಲ್ಲಿ ಎಲ್ಲ ತಂದೆತಾಯಿಯರೂ ಒಳಗೊಳ್ಳುವಂತೆ ಮಾಡಲು ಶಾಲೆಗೆ ಹೋಗದ ಮಕ್ಕಳ ತಂದೆ ತಾಯಿಯರೂ ಸೇರಿದಂತೆ ಮತ್ತು ಅವರು ತಮ್ಮ ಮಕ್ಕಳನ್ನು ನಿಯತವಾಗಿ ಶಾಲೆಗೆ ಕಳುಹಿಸುವಂತೆ ಪ್ರೇರೇಪಿಸಲು ನಿಯತಕಾಲಿಕವಾಗಿ "ತಂದೆತಾಯಿಯರ ದಿನವನ್ನು" ಆಚರಿಸುವುದು.

ಯು. ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿ, ಸಮೂಹ ಸಂಪನ್ಮೂಲ ವ್ಯಕ್ತಿ ಮತ್ತು ಶೈಕ್ಷಣಿಕ ಸಮನ್ವಯಕಾರರಿಗೆ ಶಾಲಾವ್ಯವಸ್ಥೆಯ ಸುಧಾರಣೆಯ ಬಗ್ಗೆ ರಚನಾತ್ಮಕ ಸಲಹೆಗಳಾವುವಾದರೂ ಇದ್ದರೆ, ಅವುಗಳನ್ನು ಸೂಚಿಸುವುದು.

ವಿ. ವರ್ಷದಲ್ಲಿ ನಾಲ್ಕಕ್ಕಿಂತ ಹೆಚ್ಚಿಲ್ಲದಂತೆ ಸ್ಥಳೀಯ ರಜಾದಿನಗಳನ್ನು ನಿರ್ಣಯಿಸುವುದು.

ಡಬ್ಲ್ಯೂ. ಮಕ್ಕಳು, ಮಕ್ಕಳ ಸಹಾಯವಾಣಿಯ ಉಪಯೋಗ ಮತ್ತು ಉದ್ದೇಶವನ್ನು ಅರ್ಥ ಮಾಡಿಕೊಳ್ಳಬಹುದಾದಂಥ ರೀತಿಯಲ್ಲಿ ಪ್ರತಿಯೊಂದು ಶಾಲೆಯು, ಮಕ್ಕಳ ಸಹಾಯವಾಣಿ ಸಂಖ್ಯೆ "1098" ನ್ನು ಪ್ರದರ್ಶಿಸುವಂತೆ ಮತ್ತು ಪ್ರಚಾರ ಮಾಡುವಂತೆ ನೋಡಿಕೊಳ್ಳುವುದು.

ಎಕ್ಸ್. ಒತ್ತುವರಿ ಮತ್ತು ಯಾವುದೇ ಅಡಚಣೆಯಾಗದಂತೆ ಶಾಲಾ ಅವರಣವನ್ನು ರಕ್ಷಿಸುವುದು.

ವೈ. ಈ ನಿಯಮಗಳ Vನೇ ಅಧ್ಯಾಯಕ್ಕನುಸಾರವಾಗಿ, ವಿದ್ಯಾರ್ಥಿಗಳ, ತಂದೆತಾಯಿಯರ, ಶಿಕ್ಷಕರ ಮತ್ತು ಶಾಲೆಯ ಬೋಧಕೇತರ ಸಿಬ್ಬಂದಿ ವರ್ಗದವರ ಕುಂದುಕೊರತೆಗಳನ್ನು ಹಾಗೂ ದೂರುಗಳನ್ನು ಬಗೆಹರಿಸುವುದು.

ಜಡ್. ಈ ನಿಯಮಗಳ 10ನೇ ನಿಯಮದ ಅಡಿಯಲ್ಲಿ ಅದರ ಎಲ್ಲ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದಾದಂತಹ ಮತ್ತು ಪ್ರಾಸಂಗಿಕವಾದಂತಹ ಇತರ ಎಲ್ಲ ಕಾನೂನುಬದ್ಧ ಕಾರ್ಯಗಳು, ಕೃತ್ಯಗಳು ಮತ್ತು ಕೆಲಸಗಳನ್ನು ಮಾಡುವುದು.

## ಅಧ್ಯಾಯ–IV

## ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಭೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನಗಳು

**11. ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಭೆಗಳನ್ನು ಕರೆಯುವುದು.–** (1) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು, ಆಯಾ ಶಾಲೆಯ ಆವರಣದೊಳಗೆ ಅಥವಾ ಅನುಕೂಲಕರವಾಗಬಹುದಾದಂತ ಇತರ ಸ್ಥಳದಲ್ಲಿ, ರಜಾ ದಿನಗಳಲ್ಲಿ ಶಾಲೆಗಳನ್ನು ಮುಚ್ಚಲಾಗುವ ಅವಧಿಯ ತಿಂಗಳೂ ಸೇರಿದಂತೆ, ಕನಿಷ್ಠಪಕ್ಷ ಪ್ರತಿ ಮೂವತ್ತು ದಿನಗಳಿಗೊಮ್ಮೆ ಸಭೆ ಸೇರತಕ್ಕದ್ದು.

(2) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಭೆಯನ್ನು, ಅದರ ಅಧ್ಯಕ್ಷರೊಂದಿಗೆ ಸಮಾಲೋಚಿಸಿ, ಸದಸ್ಯ ಕಾರ್ಯದರ್ಶಿಯು ನಿಗದಿಪಡಿಸಬಹುದಾದಂಥ ದಿನಗಳಂದು ಮತ್ತು ಸಮಯದಲ್ಲಿ ನಡೆಸತಕ್ಕದ್ದು.

(3) ಸದಸ್ಯ–ಕಾರ್ಯದರ್ಶಿಯು, ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪ್ರತಿಯೊಂದು ಸಭೆಯ ಬಗ್ಗೆ ಸದಸ್ಯರಿಗೆ ಕನಿಷ್ಠಪಕ್ಷ ಮೂರು ದಿನಗಳ ಮೊದಲು ನೋಟೀಸನ್ನು ನೀಡತಕ್ಕದ್ದು ಮತ್ತು ಉದ್ದೇಶಿತ ಕಾರ್ಯಸೂಚಿಯ ಒಂದು ಪ್ರತಿಯನ್ನು ನೋಟೀಸಿನೊಂದಿಗೆ ರವಾನಿಸತಕ್ಕದ್ದು.

ಆದರೆ, ಸಭಾಧ್ಯಕ್ಷರು ಕಾರ್ಯಸೂಚಿಯಲ್ಲಿ ಸೇರಿಸಿರದ ಯಾವುದೇ ತುರ್ತು ವ್ಯವಹಾರದ ವಿಷಯವನ್ನು ಸಭೆಯ ಮುಂದೆ ಮಂಡಿಸಬಹುದು.

ಅಲ್ಲದೇ, ಸದಸ್ಯ–ಕಾರ್ಯದರ್ಶಿಯು ಕನಿಷ್ಠಪಕ್ಷ ಒಂದು ದಿನ ಮೊದಲು ನೋಟೀಸನ್ನು ನೀಡುವ ಮೂಲಕ ತುರ್ತು ಸಭೆಯನ್ನು ಕರೆಯಬಹುದು.

**12. ಕೋರಂ.–** (1) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿ ಸಭೆಯನ್ನು ನಡೆಸುವುದಕ್ಕೆ ಅಗತ್ಯವಾದ ಕೋರಂ ಈ ಮುಂದಿನಂತಿರತಕ್ಕದ್ದು,–

(i) ಅಧ್ಯಕ್ಷ ಅಥವಾ ಉಪಾಧ್ಯಕ್ಷರೂ ಸೇರಿದಂತೆ ತಂದೆತಾಯಿಯರ ಪರಿಷತ್ತಿನ ಒಂಭತ್ತು ಮಂದಿ ಚುನಾಯಿತ ಪ್ರತಿನಿಧಿಗಳ ಪೈಕಿ ಕನಿಷ್ಠಪಕ್ಷ ಐದು ಮಂದಿ ಸದಸ್ಯರು;

(ii) ಪದನಿಮಿತ್ತ, ವಿದ್ಯಾರ್ಥಿ ಮತ್ತು ನಾಮನಿರ್ದೇಶಿತ ಪ್ರವರ್ಗಗಳಿಂದ ಕನಿಷ್ಠಪಕ್ಷ ತಲಾ ಒಬ್ಬ ಸದಸ್ಯ.

(2) ಕೋರಂ ಕೊರತೆಯಿಂದಾಗಿ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಭೆಯನ್ನು ನಡೆಸಲಾಗದಿದ್ದರೆ, ಆಗ ಸದರಿ ದಿನಾಂಕದಿಂದ ನಾಲ್ಕು ದಿನಗಳಿಗಿಂತ ಹೆಚ್ಚಿಲ್ಲದ, ಸದಸ್ಯ ಕಾರ್ಯದರ್ಶಿಯು ಅಧಿಸೂಚಿಸುವ ಮತ್ತೊಂದು ದಿನಕ್ಕೆ ಸಭೆಯನ್ನು ಮುಂದೂಡಬಹುದು.

(3) ಮುಂದೂಡಲ್ಪಟ್ಟ ಸಭೆಯೂ ಸಹ ಅಗತ್ಯ ಕೋರಂನ್ನು ಹೊಂದಿರದಿದ್ದಲ್ಲಿ, ಆಗ ವಾಸ್ತವವಾಗಿ ಹಾಜರಿರುವ ಸದಸ್ಯರ ಕೋರಂ ಸಾಕಾಗುತ್ತದೆ.

**13. ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಗೈರುಹಾಜರಿಯಲ್ಲಿನ ಪ್ರಕ್ರಿಯೆಗಳು.–** ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಗೈರುಹಾಜರಿರದಿದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರು ತಂದೆತಾಯಿಯರ ಪರಿಷತ್ತಿನ ಪ್ರತಿನಿಧಿಯಾಗಿರುವ ಒಬ್ಬ ಸದಸ್ಯನನ್ನು, ಚುನಾಯಿಸತಕ್ಕದ್ದು ಮತ್ತು ಅವನು ಸಭಾಧ್ಯಕ್ಷನಾಗಿ ಆ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**ವಿವರಣೆ–** ಈ ಉಪಬಂಧದ ಉದ್ದೇಶಕ್ಕಾಗಿ "ಗೈರು ಹಾಜರಿ" ಎಂದರೆ ಕೇವಲ ತಾತ್ಕಾಲಿಕ ಸ್ವರೂಪದ್ದಾಗಿರುತ್ತದೆಯೇ ಹೊರತು ಆಕಸ್ಮಿಕ ಖಾಲಿ ಹುದ್ದೆಗೆ ಉಲ್ಲೇಖಿತವಾಗುವುದಿಲ್ಲ.

**14. ಪ್ರಶ್ನೆಗಳನ್ನು ನಿರ್ಣಯಿಸುವ ವಿಧಾನ.–** (1) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಮುಂದೆ ಇರುವ ಎಲ್ಲ ವಿಷಯಗಳನ್ನು ಸಾಮಾನ್ಯವಾಗಿ ಹಾಜರಿರುವ ಸದಸ್ಯರೆಲ್ಲರು ಒಮ್ಮತಾಭಿಪ್ರಾಯದಿಂದ ನಿರ್ಧರಿಸತಕ್ಕದ್ದು.

(2) ಒಮ್ಮತಾಭಿಪ್ರಾಯ ಮೂಡದಿದ್ದಲ್ಲಿ, ಈ ನಿಯಮಗಳ 15ನೇ ನಿಯಮದ ಅಡಿಯಲ್ಲಿ ಗೊತ್ತುಪಡಿಸಲಾದ ರೀತಿಯಲ್ಲಿ ಮತ ಹಾಕುವ ಮೂಲಕ ನಿರ್ಧರಿಸತಕ್ಕದ್ದು.

**15. ಮತ ಹಾಕುವ ವಿಧಾನ.–** (1) ಎಲ್ಲ ಸದಸ್ಯರು ಮತ ಹಾಕುವುದಕ್ಕೆ ಸಮಾನ ಹಕ್ಕನ್ನು ಹೊಂದಿರತಕ್ಕದ್ದು.

(2) ಕೈಗಳನ್ನು ಎತ್ತುವ ಮೂಲಕ ಮತ ಹಾಕಬಹುದು, ಆದರೆ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು, ಯಾವುದೇ ವಿಷಯ ಅಥವಾ ವಿಷಯಗಳನ್ನು ಮತಪತ್ರದ ಮೂಲಕ ನಿರ್ಧರಿಸತಕ್ಕದ್ದೆಂದು ನಿರ್ಣಯಿಸಬಹುದು.

(3) ವಿಷಯವನ್ನು ಮತಕ್ಕೆ ಹಾಕಿದಲ್ಲಿ, ತಂದೆತಾಯಿಯರ ಪರಿಷತ್ತಿನ ಪ್ರತಿನಿಧಿಗಳಾಗಿರುವ ಬಹುಸಂಖ್ಯಾತ ಸದಸ್ಯರು ಅದನ್ನು ಬೆಂಬಲಿಸದ ಹೊರತು, ಅದನ್ನು ಅಂಗೀಕರಿಸತಕ್ಕದ್ದಲ್ಲ.

(4) ಸಮಾನ ಸಂಖ್ಯೆಯ ಮತಗಳು ಬಿದ್ದ ಸಂದರ್ಭದಲ್ಲಿ, ಸಭಾಧ್ಯಕ್ಷರು ಎರಡನೇ ಅಥವಾ ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು ಮತ್ತು ಅದನ್ನು ಚಲಾಯಿಸತಕ್ಕದ್ದು.

**16. ನಿರ್ಣಯಗಳನ್ನು ದಾಖಲಿಸುವುದು.–** (1) ಸದಸ್ಯ ಕಾರ್ಯದರ್ಶಿಯು, ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ನಿರ್ಣಯಗಳ ದಾಖಲೆಯನ್ನು ನಿರ್ವಹಿಸತಕ್ಕದ್ದು ಮತ್ತು ನಿರ್ಣಯಗಳ ಪ್ರತಿಗಳನ್ನು ಸದಸ್ಯರಿಗೆ ಪರಿಚಲನೆ ಮಾಡತಕ್ಕದ್ದು.

(2) ಮೇಲೆ ನಮೂದಿಸಿದ ದಾಖಲೆಯನ್ನು, ತಂದೆತಾಯಿಯರ ಪರಿಷತ್ತಿನ ಅವಗಾಹನೆಗಾಗಿ ಶಾಲೆಯಲ್ಲಿ ಇಡತಕ್ಕದ್ದು.

## ಅಧ್ಯಾಯ –V

## ಶಿಸ್ತು ಕ್ರಮ

**17.ದೂರುಗಳ ಪರಿಹಾರ ಕಾರ್ಯತಂತ್ರ.–** (1) 17ನೇ ನಿಯಮದ ಉದ್ದೇಶಗಳಿಗಾಗಿ, ಶಿಕ್ಷಕರು ಅಥವಾ ಬೋಧಕ ಸಿಬ್ಬಂದಿಯು ಮುಖ್ಯ ಶಿಕ್ಷಕರನ್ನು ಒಳಗೊಳ್ಳುತ್ತದೆ.

(2) ಎಲ್ಲಾ ವಿದ್ಯಾರ್ಥಿಗಳೂ, ಬೋಧಕೇತರ ಸಿಬ್ಬಂದಿ, ಶಿಕ್ಷಕರು ಮತ್ತು ತಂದೆತಾಯಿಗಳಿಗೆ ಮುಕ್ತವಾಗಿರುವಂತೆ ಶಾಲೆಯಲ್ಲಿ ಒಂದು ದೂರುಗಳ ಪೆಟ್ಟಿಗೆಯನ್ನು ಇಡತಕ್ಕದ್ದು.

(3) ಆ ಶಾಲೆಯಲ್ಲಿ ಓದುತ್ತಿರುವ ಮಗು ಅಥವಾ ಅಂಥ ಮಗುವಿನ ತಂದೆತಾಯಿಗಳು, ಶಾಲೆಯನ್ನು ಬಿಟ್ಟಿರುವ ಮಗು ಅಥವಾ ಅಂಥ ಮಗುವಿನ ತಂದೆತಾಯಿಗಳು, ಆ ಪ್ರದೇಶದಲ್ಲಿ ವಾಸವಾಗಿದ್ದು, ಆದರೆ ಶಾಲೆಗೆ ಹೋಗದಿರುವ ಮಗು ಅಥವಾ ಅಂಥ ಮಗುವಿನ ತಂದೆತಾಯಿಗಳು, ಶಾಲೆಯ ಸಿಬ್ಬಂದಿ ಸದಸ್ಯರು ಬೋಧಕ ಮತ್ತು ಭೋಧಕೇತರ. ಈ ಮುಂದಿನವುಗಳ ಸಂಬಂಧವಾಗಿ ನೇರವಾಗಿ ಆಗಲಿ ಅಥವಾ ದೂರು ಪೆಟ್ಟಿಗೆಯ ಮುಖಾಂತರವಾಗಲಿ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ಸಾಮಾನ್ಯ ಸ್ಥಾಯಿ ಸಮಿತಿಗೆ ಲಿಖಿತ ದೂರನ್ನು ಸಲ್ಲಿಸಬಹುದು.

(i) ಮಕ್ಕಳನ್ನು ಬಾಲ ಕಾರ್ಮಿಕರನ್ನಾಗಿ ನೇಮಿಸಿಕೊಳ್ಳುವುದು ;

(ii) ಶಾಲೆಯಲ್ಲಿ ಮಕ್ಕಳಿಗೆ ದೈಹಿಕ ಅಥವಾ ಲೈಂಗಿಕ ಕಿರುಕುಳ ನೀಡಿರುವುದು ;

(iii) ಶಾಲೆಯಲ್ಲಿ ಶಾಲಾ ಸಿಬ್ಬಂದಿ ಬೋಧಕ ಅಥವಾ ಬೋಧಕೇತರ., ಮಕ್ಕಳನ್ನು ಲೈಂಗಿಕ ಕಿರುಕುಳ ಅಥವಾ ನಿಂದನೆಗೆ ಒಳಪಡಿಸಿರುವುದು ;

(iv) ಮಕ್ಕಳು ಅಥವಾ ಯಾರೇ ಸಿಬ್ಬಂದಿ ಸದಸ್ಯರಿಗೆ ಯಾವುದೇ ವಿಧವಾದ ಅಗೌರವ ಅಥವಾ ತಾರತಮ್ಯ ಎಸಗಿರುವುದು ;

(v) ಶಿಕ್ಷಕರು, ಬೋಧಕೇತರ ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿ ಸದಸ್ಯರ ಉದಾಸೀನತೆ ನಿರ್ಲಕ್ಷ್ಯ. ;

(vi) ಶಿಕ್ಷಕರು, ಬೋಧಕೇತರ ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯರುಗಳ ಕರ್ತವ್ಯ ಲೋಪ;

(vii) ಯಾರೇ ಶಿಕ್ಷಕ, ಬೋಧಕೇತರ ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯರ ದುರ್ವರ್ತನೆ, ದುರ್ನಡತೆ ಅಥವಾ ಅಸಭ್ಯ ವರ್ತನೆ;

(viii) ಯಾರೇ ಶಿಕ್ಷಕ, ಬೋಧಕೇತರ ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯರಿಂದ ತಪ್ಪು ನಿರ್ವಹಣೆ;

(ix) ಯಾರೇ ಶಿಕ್ಷಕ, ಬೋಧಕೇತರ ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯರಿಂದ ನಿಧಿಗಳ ಮತ್ತು ಸೌಲಭ್ಯಗಳ ದುರುಪಯೋಗ;

(x) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಮಗ್ರ ಕಾರ್ಯ ನಿರ್ವಹಣೆ;

(4) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಅಧ್ಯಕ್ಷರು ಸ್ವೀಕರಿಸಿದ ದೂರುಗಳನ್ನು ಕಡೇಪಕ್ಷ ವಾರದ ಆಧಾರದ ಮೇಲೆ ಅವಶ್ಯಕವಾಗಿ ಪರಿಶೀಲಿಸಿ ಅದನ್ನು ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ಕಳುಹಿಸುವುದು.

(5) ಬಂದಿರುವ ದೂರು, ಯಾರೇ ಬೋಧಕ/ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯರಿಂದ ಶಾಲೆ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ರೂ.1000–00ಗಳನ್ನು ಮೀರಿದ ನಿಧಿಗಳು, ಆಸ್ತಿ, ಚರಾಸ್ತಿ ಅಥವಾ ಸ್ಥಿರಾಸ್ತಿ ಅಥವಾ ಸೌಲಭ್ಯಗಳ ದುರುಪಯೋಗ ಅಥವಾ ಅವ್ಯವಸ್ಥೆಗೆ ಸಂಬಂಧಿಸಿದ್ದಾಗಿರುವಲ್ಲಿ, ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಈ ಕೆಳಕಂಡ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು;

(i) ದ್ವಿಸದಸ್ಯ ವಿಚಾರಣಾ ತಂಡವನ್ನು ರಚಿಸತಕ್ಕದ್ದು;

(ii) ದೂರನ್ನು ಸ್ವೀಕರಿಸಿದ ಏಳು ದಿನಗಳೊಳಗೆ ಒಂದು ವಿಚಾರಣಾ ತಂಡವನ್ನು ರಚಿಸಬೇಕು. ಯಾವುದೇ ವಿಚಾರಣಾ ತಂಡವನ್ನು ರಚಿಸದಿರುವ ಸಂದರ್ಭದಲ್ಲಿ ಫಿರ್ಯಾದುದಾರನು ನೇರವಾಗಿ ಮಹಾನಗರ ಪಾಲಿಕೆ/ಪುರಸಭೆ/ನಗರಸಭೆ/ಪಟ್ಟಣ ಪಂಚಾಯಿತಿ/ತಾಲ್ಲೂಕು ಪಂಚಾಯತ್‌ನ್ನು ಅಥವಾ ಕ್ಷೇತ್ರ ಶಿಕ್ಷಣಾಧಿಕಾರಿಯವರನ್ನು ಸಂಪರ್ಕಿಸಬಹುದು.

(iii) ವಿಚಾರಣಾ ತಂಡವು ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯಿಂದ, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯಿಂದ ಒಬ್ಬ ಸದಸ್ಯನನ್ನು ಹಾಗೂ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯಿಂದ ಒಬ್ಬ ಸದಸ್ಯನನ್ನು ಒಳಗೊಂಡಿರತಕ್ಕದ್ದು. ವಿಚಾರಣಾ ತಂಡದ ಉಭಯ ಸದಸ್ಯರನ್ನು ದೂರಿನಲ್ಲಿ ಯಾವುದೇ ರೀತಿಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ತೊಡಗಿಸಬಾರದು/ಹೆಸರಿಸಬಾರದು.

(iv) ವಿಚಾರಣಾ ತಂಡವು, ಇದರ ರಚನೆಯ ಹದಿನೈದು ದಿನದೊಳಗೆ ವಿಚಾರಣೆಯನ್ನು ಪೂರ್ಣಗೊಳಿಸಬೇಕು ಮತ್ತು ತಮ್ಮ ತೀರ್ಮಾನಗಳನ್ನು ಶಿಫಾರಸ್ಸುಗಳೊಂದಿಗೆ ಪೌರನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಗೆ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ಕಳುಹಿಸಬೇಕು

(V) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ವಿಚಾರಣಾ ತಂಡದ ವರದಿ ಮತ್ತು ಶಿಫಾರಸ್ಸುಗಳ ಆಧಾರದ ಮೇಲೆ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು.

(6) ದೂರು, ಯಾರೇ ಶಿಕ್ಷಕ/ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯನಿಂದ ಶಾಲೆ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ರೂ. 1000/–ಗಳಿಗಿಂತ ಕಡಿಮೆ ಇರುವ ನಿಧಿಗಳು, ಆಸ್ತಿ, ಚರ ಅಥವಾ ಸ್ಥಿರಾಸ್ತಿ ಅಥವಾ ಸೌಲಭ್ಯಗಳ ದುರುಪಯೋಗ ಅಥವಾ ಅವ್ಯವಸ್ಥೆಗೆ ಸಂಬಂಧಿಸಿದ್ದಾಗಿರುವಲ್ಲಿ, ಅಥವಾ ದೂರು ಯಾವುದೇ ಬೋಧಕ ಅಥವಾ ಬೋಧಕೇತರ ಸಿಬ್ಬಂದಿ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸದಸ್ಯರ ಉದಾಸೀನತೆ, ಕರ್ತವ್ಯ ಲೋಪ, ದುರ್ವರ್ತನೆ, ದುರ್ನಡತೆ ಅಥವಾ ಅಸಭ್ಯ ವರ್ತನೆಗೆ ಸಂಬಂಧಿಸಿದ್ದಾಗಿರುವಲ್ಲಿ, ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಪರಿಶೀಲನಾ ಸಭೆಯಲ್ಲಿ ಇದನ್ನು ಚರ್ಚಿಸತಕ್ಕದ್ದು ಮತ್ತು ಅಂಥ ವ್ಯಕ್ತಿ ವಿರುದ್ಧ, ಸೂಕ್ತ ಕ್ರಮವನ್ನು ಕೈಗೊಳ್ಳತಕ್ಕದ್ದು;

(7) ದೂರು, ಮಕ್ಕಳನ್ನು ಯಾವುದೇ ರೂಪದಲ್ಲಿ ದೈಹಿಕವಾಗಿ ಅಥವಾ ಲೈಂಗಿಕವಾಗಿ ದುರುಪಯೋಗಪಡಿಸಿ ಕೊಂಡಿರುವುದಕ್ಕೆ ಸಂಬಂಧಪಟ್ಟಿರುವಲ್ಲಿ, ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಕೆಳಕಂಡ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು,–

(i) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಕೂಡಲೇ ಸಂಬಂಧಪಟ್ಟ ಶಾಲೆಯ ಮುಖ್ಯ ಶಿಕ್ಷಕರಿಗೆ ಮಗುವನ್ನು ಬಾಲಕ ನ್ಯಾಯ ಪಾಲನೆ ಮತ್ತು ರಕ್ಷಣೆ ಅಧಿನಿಯಮ, 2000 ಅಡಿಯಲ್ಲಿ ರಚಿಸಿದ ಮಕ್ಕಳ ಕಲ್ಯಾಣ ಸಮಿತಿಯ ಮುಂದೆ ಹಾಜರುಪಡಿಸುವಂತೆ ನಿರ್ದೇಶಿಸತಕ್ಕದ್ದು ಮತ್ತು ಮುಂದಿನ ಕ್ರಮಕ್ಕಾಗಿ ವಿಷಯವನ್ನು ಪೋಲೀಸರಿಗೆ ಕಳುಹಿಸತಕ್ಕದ್ದು;

(ii) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಕೂಡಲೇ ಇಬ್ಬರು ಮಹಿಳೆಯರನ್ನು ಒಳಗೊಂಡ ಮೂವರು ಸದಸ್ಯರ ಒಂದು ವಿಚಾರಣಾ ತಂಡವನ್ನು ರಚಿಸತಕ್ಕದ್ದು, ವಿಚಾರಣಾ ತಂಡದ ಸದಸ್ಯರಲ್ಲಿ ಒಬ್ಬರು ಶಾಲೆಯೊಂದಿಗೆ ಕಾರ್ಯನಿರತವಾಗಿಲ್ಲದಿರುವ ಒಂದು ಸರ್ಕಾರೇತರ ಸಂಸ್ಥೆಯಿಂದ ಬಂದಿರುವವರು ಆಗಿರಬೇಕು.

(iii) ಸದರಿ ವಿಚಾರಣಾ ತಂಡವು ಅದರ ರಚನೆಯ ಹದಿನೈದು ದಿನಗಳೊಳಗಾಗಿ ದೂರನ್ನು ಪರಿಶೀಲಿಸಿ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಗೆ ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿಗೆ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ವರದಿಯನ್ನು ಸಲ್ಲಿಸಬೇಕು.

(iv) ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ವಿಚಾರಣಾ ತಂಡದ ವರದಿ ಮತ್ತು ಶಿಫಾರಸ್ಸುಗಳ ಆಧಾರದ ಮೇಲೆ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು,

(8) ದೂರು, ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಸಮಗ್ರ ಕಾರ್ಯ ನಿರ್ವಹಣೆಗೆ ಸಂಬಂಧಪಟ್ಟಿದ್ದು, ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಯಾವೊಬ್ಬ ಸದಸ್ಯನ ವಿರುದ್ಧವಾಗಿರದ ಸಂದರ್ಭದಲ್ಲಿ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಪೌರಸಭೆಗಳಿಗೆ

ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಈ ಮುಂದಿನ ಕಾರ್ಯವಿಧಾನವನ್ನು ಅನುಸರಿಸಬೇಕು.

(i) ದೂರು ಸ್ವೀಕರಿಸಿದ ಹತ್ತು ದಿನಗಳೊಳಗಾಗಿ ಇಬ್ಬರು ಸದಸ್ಯರಿರುವ ಒಂದು ತಂಡವನ್ನು ರಚಿಸಬೇಕು.

(ii) ಸದರಿ ತಂಡವು ದೂರನ್ನು ಪರಿಶೀಲಿಸಿ ಅವ್ಯವಹಾರಗಳನ್ನು ಸರಿಪಡಿಸುವ ವಿಧಾನಗಳನ್ನು ಸೂಚಿಸಿ, ತಂಡ ರಚನೆಯಾದ ಹತ್ತು ದಿನಗಳೊಳಗಾಗಿ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಗೆ ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ವರದಿ ನೀಡಬೇಕು.

(iii) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಗೆ ದೂರು ಪ್ರತಿಗಳ ಫಿರ್ಯಾದುದಾರನ ಹೆಸರು ತಿಳಿಸಿರದಿದ್ದಲ್ಲಿ. ಮತ್ತು ಪೌರ ನಿಗಮಗಳಿಗೆ ಸಂಬಂಧಿಸಿದಂತೆ ಸದರಿ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿ ತಂಡದ ವರದಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಕಳಿಸಿ ಅವ್ಯವಹಾರಗಳನ್ನು ಸರಿಪಡಿಸಲು ಹತ್ತು ದಿನಗಳ ಕಾಲಾವಕಾಶ ನೋಟೀಸು ಕಳುಹಿಸಿದ ದಿನಾಂಕದಿಂದ ನೀಡಬೇಕು.

(iv) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಹದಿನೈದು ದಿನದೊಳಗಾಗಿ ಕಾರಣ ಕೇಳುವ ನೋಟೀಸು ಕಳುಹಿಸಿದ ದಿನಾಂಕದಿಂದ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಪೌರ ಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಗೆ ಅನುಪಾಲನಾ ವರದಿಯನ್ನು ಸಲ್ಲಿಸಬೇಕು.

(v) ಅನುಪಾಲನಾ ವರದಿಯನ್ನು ಸ್ವೀಕರಿಸಿದ ತರುವಾಯ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಅವ್ಯವಹಾರಗಳನ್ನು ನಿಜವಾಗಿಯೂ ಸರಿಪಡಿಸಿದ ಬಗ್ಗೆ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಖುದ್ದಾಗಿ ಪರಿಶೀಲಿಸಬೇಕು.

(vi) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಅನುಪಾಲನಾ ವರದಿಯನ್ನು ಸಲ್ಲಿಸದಿದ್ದರೂ ಅವ್ಯವಹಾರಗಳನ್ನು ಸರಿಪಡಿಸಿ ಅಥವಾ ಕಾರಣ ಕೇಳುವ ನೋಟೀಸಿಗೆ ಅನುಗುಣವಾಗಿ ಕ್ರಮ ಕೈಗೊಳ್ಳಲು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ನಿರಾಕರಿಸಿದೆ ಎಂದು ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ನಂಬಿದರೆ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯನ್ನು ಹತ್ತು ದಿನಗಳ ಅವಧಿಯೊಳಗಾಗಿ ರದ್ದು ಮಾಡಬಾರದೇಕೆ ಎಂಬ ಬಗ್ಗೆ ಕಾರಣ ಕೇಳುವ ಎರಡನೇ ನೋಟೀಸನ್ನು ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು

ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಜಾರಿ ಮಾಡಬೇಕು.

(vii) ಅವ್ಯವಹಾರಗಳನ್ನು ಸರಿಪಡಿಸಲು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಎರಡನೇ ಹತ್ತು ದಿನಗಳ ಅವಧಿಯಲ್ಲಿ ತೆಗೆದುಕೊಂಡ ಕ್ರಮಗಳು ತೃಪ್ತಿಕರವಾಗಿಲ್ಲದಿದ್ದಲ್ಲಿ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯು, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯನ್ನು ರದ್ದುಪಡಿಸತಕ್ಕದ್ದು,

(viii) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯನ್ನು ರದ್ದುಪಡಿಸಿದ ಸಂದರ್ಭದಲ್ಲಿ ಅದು ಹಾಗೆ ರದ್ದುಗೊಂಡ ಒಂದು ತಿಂಗಳೊಳಗಾಗಿ ಶಾಲಾ ಪ್ರಾಧಿಕಾರಗಳು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಮರು ರಚನೆ ಮಾಡಿದ ಬಗ್ಗೆ ಖಚಿತಪಡಿಸಿಕೊಳ್ಳಬೇಕು.

(ix) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ರಚನೆಯಾಗುವವರೆಗೆ ಅದರ ಪ್ರಕಾರ್ಯಗಳನ್ನು ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ನಿರ್ವಹಿಸಬೇಕು.

**18. ಖಾತೆಯ ನಿರ್ವಹಣೆಯು ನಿಂತುಹೋಗುವುದು.–** ಮೇಲಿನ 17ನೇ ನಿಯಮದಡಿ ಸ್ವೀಕರಿಸಿದ ದೂರು, ಈ ನಿಯಮಗಳ 21ನೇ ನಿಯಮದ ಮೇರೆಗೆ ರಚಿಸಲಾದ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಖಾತೆಯ ವ್ಯವಹಾರಗಳನ್ನು ಮೋಸದಿಂದ ನಿರ್ವಹಿಸಿದುದಕ್ಕೆ ಸಂಬಂಧಪಟ್ಟಿದ್ದರೆ, ಅಧ್ಯಕ್ಷ ಹಾಗೂ ಸದಸ್ಯ ಕಾರ್ಯದರ್ಶಿ ಆ ಖಾತೆಯನ್ನು ನಿರ್ವಹಿಸುವುದನ್ನು ನಿಲ್ಲಿಸುವಂತೆ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯು ನಿರ್ದೇಶನ ನೀಡಬೇಕು. ಶಾಲೆಯ ಮುಖ್ಯ ಶಿಕ್ಷಕರು ಮತ್ತು ಶಾಲೆಯಲ್ಲಿ ಸೇವಾ ಹಿರಿತನವುಳ್ಳ ಶಿಕ್ಷಕ ಪೌರ ನಿಗಮಗಳಿಗೆ ಸಂಬಂಧಿಸಿದಂತೆ ವಾರ್ಡ್ ಸಮಿತಿ/ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ, ಪೌರಸಭೆಗಳಿಗೆ ಸಂಬಂಧಿಸಿದಂತೆ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸಮಿತಿ/ಜಂಟಿ ಸಮಿತಿ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸ್ಥಾಯಿ ಸಮಿತಿಯ ಅನುಮೋದನೆ ಪಡೆದು ಸದರಿ ದೂರು ಸ್ವೀಕರಿಸಿದ ಏಳು ದಿನಗಳ ಒಳಗಾಗಿ ಸದರಿ ಖಾತೆಯನ್ನು ನಿರ್ವಹಿಸಬೇಕು.

## ಅಧ್ಯಾಯ– VI

## ಸಂಕೀರ್ಣ

**19. ಸದಸ್ಯತ್ವವನ್ನು ಕೊನೆಗೊಳಿಸುವುದು.–** (1) ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ ಇತರ ಸದಸ್ಯರ ಗರಿಷ್ಠ ಪದಾವಧಿಯು ಮೂರು ವರ್ಷಗಳು ಅಥವಾ ಸಂಬಂಧಿಸಿದ ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿ/ ತಾಲ್ಲೂಕು ಪಂಚಾಯತ್‌ನ ಅವಧಿಯು ಮುಕ್ತಾಯವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅದು ಆಗಿರುತ್ತದೆ.

(2) (1)ನೇ ಖಂಡದಲ್ಲಿ ನಮೂದಿಸಲಾದವರನ್ನು ಹೊರತುಪಡಿಸಿ ಇತರ ಸದಸ್ಯರ ಸದಸ್ಯತ್ವವು ಸಂಬಂಧಿಸಿದ ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿ/ತಾಲ್ಲೂಕು ಪಂಚಾಯತ್‌ನ ಅವಧಿಯು ಮುಕ್ತಾಯವಾಗುವ ವರೆಗೆ ಮಾತ್ರ ಇರುವುದು.

ಪರಂತು, ಈ ಕೆಳಕಂಡ ಯಾವುದೇ ಘಟನೆಗಳು ಸಂಭವಿಸಿದಲ್ಲಿ ಸದಸ್ಯತ್ವವು ರದ್ದಾಗತಕ್ಕದ್ದು,–

(i) ಆತ / ಆಕೆ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ನಿರಂತರ ಮೂರು ಸಭೆಗಳಿಗೆ ಗೈರು ಹಾಜರಾದಲ್ಲಿ;

(ii) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ವ್ಯಾಪ್ತಿಯಲ್ಲಿ ಬರುವ ಯಾವುದೇ ವ್ಯವಹಾರದ ನಿರ್ವಹಣೆಯಲ್ಲಿ ಆತ / ಆಕೆ ಭ್ರಷ್ಟಾಚಾರದಲ್ಲಿ ತೊಡಗಿದ್ದಲ್ಲಿ;

(iii) ಯಾವುದೇ ಕಾರಣದ ನಿಮಿತ್ತ ಸದಸ್ಯ ತಂದೆತಾಯಿಯ ಮಗುವು ಶಾಲೆಯ ವಿದ್ಯಾರ್ಥಿಯಾಗಿರುವುದು ನಿಂತುಹೋದಲ್ಲಿ ;

(iv) ಯಾವುದೇ ನ್ಯಾಯಾಲಯದಿಂದ ಆತ / ಆಕೆಯು ಅಪಾದಿತನೆಂದು ತೀರ್ಮಾನವಾಗಿದ್ದಲ್ಲಿ ;

(v) ಆತ/ಆಕೆ ಶಾಲೆಯಲ್ಲಿ ಓದುತ್ತಿರುವ ಯಾವುದೇ ಮಗುವಿನ ತಂದೆ–ತಾಯಿಯು ಆಗಿರದಿದ್ದಲ್ಲಿ ; ಮತ್ತು

(vi) ಈ ನಿಯಮಗಳ 17ನೇ ನಿಯಮದ ಮೇರೆಗೆ ಮುಕ್ತಾಯಗೊಳಿಸಿದಲ್ಲಿ.

**20. ಆಕಸ್ಮಿಕ ಖಾಲಿಸ್ಥಾನಗಳನ್ನು ತುಂಬುವುದು.–** (1) ಯಾವುದೇ ಸದಸ್ಯರ ಸ್ಥಾನವು ಆಕೆಯ/ ಆತನ ಪದಾವಧಿಯು ಸಾಮಾನ್ಯ ಕ್ರಮದಲ್ಲಿ ಮುಕ್ತಾಯಗೊಳ್ಳುವ ಮೊದಲೇ ಖಾಲಿಯಾದಲ್ಲಿ, ತತ್ಪರಿಣಾಮವಾಗಿ ಉಂಟಾಗುವ ಆ ಆಕಸ್ಮಿಕ ಖಾಲಿಸ್ಥಾನವನ್ನು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಉಪವಿಧಿಗಳ ಅನುಸಾರ ತುಂಬಬಹುದು

**ಪರಂತು,** ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯು ಈ ನಿಯಮಗಳ 17ನೇ ನಿಯಮದ ಮೇರೆಗೆ ಸಂಪೂರ್ಣವಾಗಿ ವಿಸರ್ಜನೆಯಾಗಿದ್ದಲ್ಲಿ, ನಿಯಮ 17ರ ಮೇರೆಗೆ ಗೊತ್ತುಪಡಿಸಿದ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

(2) (1)ನೇ ಉಪ–ನಿಯಮದ ಮೇರೆಗೆ ನೇಮಕಗೊಂಡ ಸದಸ್ಯನ ಪದಾವಧಿಯು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಉಳಿದ ಅವಧಿಗೆ ಅಥವಾ 19ನೇ ನಿಯಮದ (2)ನೇ ಉಪ–ನಿಯಮದ ಪ್ರಕಾರ ಆತ/ಆಕೆ ಸದಸ್ಯನಾಗಿರುವುದು ಮುಕ್ತಾಯವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರುವುದು.

**21 ಹಣಕಾಸು–** (1) ರಿಜರ್ವ್ ಬ್ಯಾಂಕ್‌ನಿಂದ ಮನ್ನಣೆ ಪಡೆದ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಅನುಸೂಚಿತ ಬ್ಯಾಂಕ್ ಅಥವಾ ಸಹಕಾರಿ ಬ್ಯಾಂಕ್‌ನ ಖಾತೆಯಲ್ಲಿ ಅಥವಾ ಅಂಚೆ ಕಛೇರಿಯಲ್ಲಿ ಶಾಲೆಯ ಎಲ್ಲಾ ನಿಧಿಗಳನ್ನು ಠೇವಣಿ ಇಡತಕ್ಕದ್ದು. ಅಂಥ ಖಾತೆಯನ್ನು ಶಾಲೆಯ ಹೆಸರಿನಲ್ಲಿ ತೆರೆಯತಕ್ಕದ್ದು.

(2) ಮೇಲೆ ತಿಳಿಸಿರುವ ಖಾತೆಗಳನ್ನು ಅಧ್ಯಕ್ಷರು ಹಾಗೂ ಸದಸ್ಯ ಕಾರ್ಯದರ್ಶಿಯವರು ಜಂಟಿಯಾಗಿ ನಿರ್ವಹಿಸತಕ್ಕದ್ದು.

(3) ಶಾಲೆ ಮತ್ತು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಎಲ್ಲಾ ಆದಾಯ ಮತ್ತು ವೆಚ್ಚಗಳನ್ನು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪ್ರತಿ ಸಭೆಯಲ್ಲೂ ಚರ್ಚಿಸತಕ್ಕದ್ದು.

(4) ಒಂದು ಸಾವಿರ ರೂ.ಗಳನ್ನು ಮೀರಿದ ಯಾವುದೇ ಹಣ ಹಿಂತೆಗೆಯುವಿಕೆಗೆ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪೂರ್ವಾನುಮತಿ ಪಡೆಯತಕ್ಕದ್ದು.

ಪರಂತು, ತುರ್ತು ವೆಚ್ಚಗಳನ್ನು ಭರಿಸಲು ಯಾವುದೇ ಹಣವನ್ನು ಹಿಂತೆಗೆದುಕೊಳ್ಳಬಹುದು ಮತ್ತು ಅದನ್ನು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಮುಂದಿನ ಸಭೆಯಲ್ಲಿ ಚರ್ಚಿಸತಕ್ಕದ್ದು.

**22.ಲಾಭದ ಮೇಲೆ ನಿಷೇಧ.–** ಶಾಲೆಯ ಲಾಭ ಮತ್ತು ಆಸ್ತಿಯ ಯಾವುದೇ ಭಾಗವನ್ನು ವೃತ್ತಿವೇತನದ ರೂಪದಲ್ಲಾಗಲೀ ಅಥವಾ ಅನ್ಯಥಾ ಲಾಭದ ರೂಪದಲ್ಲಾಗಲೀ ಯಾವುದೇ ಸದಸ್ಯನಿಗೆ ಅಥವಾ ಯಾವುದೇ ಸದಸ್ಯರ ಮೂಲಕ ಪಡೆಯ ಬಯಸುವ ಯಾವುದೇ ವ್ಯಕ್ತಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ವಿನಿಯೋಗಿಸತಕ್ಕದ್ದಲ್ಲ ಅಥವಾ ವರ್ಗಾಯಿಸತಕ್ಕದ್ದಲ್ಲ.

ಪರಂತು ಈ ನಿಯಮದಲ್ಲಿರುವ ಯಾವುದೂ, ಶಾಲೆಯ ಪರವಾಗಿ ಸದ್ಭಾವನೆಯಿಂದ ಖರ್ಚು ಮಾಡಿದ ಯಾವುದೇ ಸದಸ್ಯನಿಗೆ ಮರುಪಾವತಿಯ ಸಂದಾಯ ಮಾಡುವುದಕ್ಕೆ ಅಡ್ಡಿಪಡಿಸತಕ್ಕದ್ದಲ್ಲ.

ಮತ್ತು ಪರಂತು, ಸದಸ್ಯರಿಗೆ ತರಬೇತಿಗಾಗಿ ಹಂಚಿಕೆಯಾದ ಯಾವುದೇ ಮೊತ್ತವನ್ನು ಸದ್ಭಾವನೆಯಿಂದ ಅಂತಹ ಸದಸ್ಯರಿಗೆ ಸಂದಾಯ ಮಾಡುವುದಕ್ಕೆ ಈ ನಿಯಮದಲ್ಲಿರುವ ಯಾವುದೂ ಅಡ್ಡಿಪಡಿಸತಕ್ಕದ್ದಲ್ಲ.

**23. ಅಧಿಕೃತ ಸಂವಹನ ಮತ್ತು ಒಪ್ಪಂದಗಳು.–** (1) ಸದಸ್ಯ ಕಾರ್ಯದರ್ಶಿಯು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪೂರ್ವಾನುಮೋದನೆಯನ್ನು ಪಡೆದು ನಿಯಮದಲ್ಲಿ 10ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಲು ಶಾಲೆ ಅಥವಾ ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಪರವಾಗಿ ಲಿಖಿತ ಒಪ್ಪಂದಗಳನ್ನು ಮಾಡಿಕೊಳ್ಳತಕ್ಕದ್ದು.

(2) ಶಾಲಾ ಅಭಿವೃದ್ಧಿ ಮತ್ತು ನಿರ್ವಹಣ ಸಮಿತಿಯ ಎಲ್ಲಾ ಅಧಿಕೃತ ಪತ್ರಗಳನ್ನು ಸದಸ್ಯ ಕಾರ್ಯದರ್ಶಿಯು ಸಹಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಟಿ. ಜಯರಾಂ**

ಪಿ.ಆರ್. 739

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. (ಪ್ರೌಢ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 125 ಎಫ್‌ಎಎಫ್ 2009, ಬೆಂಗಳೂರು, ದಿನಾಂಕ: 23ನೇ ಜುಲೈ 2010**

ಕರ್ನಾಟಕ ಅರಣ್ಯ ಕಾಯ್ದೆ 1963ರ (1964ನೇ ಇಸವಿಯ ಕಾಯ್ದೆ 5) ಕಲಂ–4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಧಾರವಾಡ ಜಿಲ್ಲೆಯ, ಧಾರವಾಡ ತಾಲ್ಲೂಕು, ಗರಗ ಹೋಬಳಿ, ಮುಗಳಿ ಗ್ರಾಮದ ಸರ್ಕಾರಿ ಜಮೀನುಗಳನ್ನು ಈ ಅಧಿಸೂಚನೆಯು ಗೆಜ್ಜೆಟ್‌ನಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ "ಮೀಸಲು ಅರಣ್ಯ"ವೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | | |
|---|---|---|
| 1) ಗ್ರಾಮದ ಹೆಸರು | : | ಮುಗಳಿ |
| 2) ಸರ್ವೆ ನಂಬರು | : | 39 |
| 3) ವಿಸ್ತೀರ್ಣ | : | 80ಎ.–31ಗುಂ. (32.68 ಹೆ.) |
| 4) ಕ್ಷೇತ್ರದ ಹೆಸರು | : | ಮುಗಳಿ |

2) ಮೇಲ್ಕಂಡ ಕಾಯ್ದೆಯ ಕಲಂ 4(1)(ಸಿ) ಪ್ರಕಾರ ಕರ್ನಾಟಕ ಸರ್ಕಾರವು ಉಪ ವಿಭಾಗಾಧಿಕಾರಿಗಳು, ಧಾರವಾಡ, ಉಪ ವಿಭಾಗ ಇವರನ್ನು ಅರಣ್ಯ ವ್ಯವಸ್ಥಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿದೆ. ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಮೇಲೆ ನಮೂದಿಸಿರುವ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದಾಗಿರುವ ಹಕ್ಕು ಬಾಧ್ಯತೆಗಳನ್ನು ಇತ್ಯರ್ಥಗೊಳಿಸಿ, ನಿರ್ಧರಿಸಿ, ವಿಚಾರಣೆ ಮಾಡಿ ತೀರ್ಮಾನಿಸುವುದು.

3) ಮೇಲ್ಕಂಡ ಕಾಯ್ದೆಯ ಕಲಂ–4(2) ಪ್ರಕಾರ ಕರ್ನಾಟಕ ಸರ್ಕಾರವು, ಉಪ ಅರಣ್ಯ ಸಂರಕ್ಷಣಾಧಿಕಾರಿ, ಧಾರವಾಡ ವಿಭಾಗ, ಧಾರವಾಡ ಇವರನ್ನು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸಹಕರಿಸಲು ಹಾಗೂ ಅರಣ್ಯ ಇಲಾಖೆಯನ್ನು ಪ್ರತಿನಿಧಿಸಲು ನೇಮಿಸಿದೆ.

4) ಮೇಲ್ಕಂಡ ಕಾಯ್ದೆಯ ಕಲಂ 11, 12 ಮತ್ತು 14ನೇ ಪ್ರಕರಣಗಳ ಪ್ರಕಾರ ಅರಣ್ಯ ವ್ಯವಸ್ಥಾಪನಾಧಿಕಾರಿಗಳು, ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ತಿಂಗಳೊಳಗೆ ಬಾಧಿತ ವ್ಯಕ್ತಿಗಳು ಸಲ್ಲಿಸುವ ಮೇಲ್ಮನವಿಗಳನ್ನು ಪರಿಶೀಲಿಸಲು ಸದರಿ ಕಾಯ್ದೆಯ ಕಲಂ 16(1) ರ ಪ್ರಕಾರ ಕರ್ನಾಟಕ ಕಂದಾಯ ಮೇಲ್ಮನವಿ ನ್ಯಾಯ ಮಂಡಲಿಗೆ ಅಧಿಕಾರವಿರುತ್ತದೆ.

5) ಮೇಲ್ಕಂಡ ಕಾಯ್ದೆ 15ನೇ ಪ್ರಕರಣದ ಪ್ರಕಾರ ಭಾದಿತವಾದ ಯಾವುದೇ ವ್ಯಕ್ತಿಯು ಸದರಿ ಕಾಯ್ದೆ ಪ್ರಕರಣ 16(2)ನೇ ಪ್ರಕಾರ ಆದೇಶ ಹೊರಡಿಸಿದ ದಿನಾಂಕದಿಂದ ಮೂರು ತಿಂಗಳೊಳಗೆ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

ಮೇಲಿನ ಅನುಸೂಚಿತ ಪ್ರದೇಶಗಳ ಸಂಕ್ಷಿಪ್ತ ಸರಹದ್ದುಗಳು ಈ ಕೆಳಗಿನಂತಿವೆ.

(ಅ) ಉತ್ತರಕ್ಕೆ:– ಮುಗಳಿಯಿಂದ ಕಿತ್ತೂರಿಗೆ ಹೋಗುವ ರಸ್ತೆ ಮತ್ತು ಸ.ನಂ.23.

(ಆ) ಪೂರ್ವಕ್ಕೆ:– ಸ.ನಂ.40 ಮತ್ತು ಸ.ನಂ.15.

(ಇ) ದಕ್ಷಿಣಕ್ಕೆ:– ಸ.ನಂ.16, 19 ಮತ್ತು 18ರಲ್ಲಿ 1999ರ ಅಕೇಶಿಯಾ ಮತ್ತು ಮಿಶ್ರ ನೆಡುತೋಪು ಇರುತ್ತದೆ.

(ಈ) ಪಶ್ಚಿಮಕ್ಕೆ:– ಸ.ನಂ.23 ರಲ್ಲಿ 1999ರ ಅಕೇಶಿಯಾ ಮತ್ತು ಮಿಶ್ರ ನೆಡುತೋಪು ಇರುತ್ತದೆ.

**ಸೀಮಾ ವಿವರಣೆ**

**ಉತ್ತರ:** ಪ್ರಾರಂಭಿಕ ಸ್ಥಾನವು ಮದನಬಾವಿ ಮತ್ತು ಮುಗಳಿ ಗ್ರಾಮದ ಗಡಿಯಿಂದ ರಸ್ತೆಯ ಬದಿಯ ರೆಪರನ್ಸ ಪಾಯಿಂಟನಿಂದ 150° ಕೋನದೊಂದಿಗೆ 280 ಮೀಟರ್ ಚಲಿಸಿ ಸೀಮಾ ರೇಖೆಯು ಮುಗಳಿ ಗ್ರಾಮದ ಸ.ನಂ.39 ಹಾಗೂ ಸ.ನಂ.23 ರ ಕ್ಷೇತ್ರದ ವಾಯುವ್ಯ ದಿಕ್ಕಿನ ಮೂಲೆಯಲ್ಲಿ ಸ್ಥಾನ ಸಂಖ್ಯೆ **ಎ** ಯಿಂದ 67° ಕೋನದೊಂದಿಗೆ ಆರಂಭವಾಗಿ ಮುಂದೆ ಮುಗಳಿ ಗ್ರಾಮದ ಸ.ನಂ.23ನ್ನು ಹೊರತುಪಡಿಸಿ ಇದರ ದಕ್ಷಿಣ ಗಡಿಗುಂಟ ಪೂರ್ವಾಭಿಮುಖವಾಗಿ ಚಲಿಸುತ್ತಾ ಬಿ ಸ್ಥಾನವನ್ನು ತಲುಪಿ ಮುಂದೆ ಮುಗಳಿ ಗ್ರಾಮಕ್ಕೆ ಹೋಗುವ ರಸ್ತೆ ಪಕ್ಕದಲ್ಲಿ ಪೂರ್ವಕ್ಕೆ ಚಲಿಸಿ ಕ್ಷೇತ್ರದ ಈಶಾನ್ಯ ದಿಕ್ಕಿನ ಮೂಲೆಯಲ್ಲಿ **ಡಿ** ಸ್ಥಾನವನ್ನು ಸೇರುತ್ತದೆ.

**ಉತ್ತರದಲ್ಲಿ ಸೀಮಾ ರೇಖೆಯು ಈ ಕೆಳಗಿನಂತೆ ಚಲಿಸಿರುತ್ತದೆ.**

| ಸ್ಥಾನದಿಂದ ಸ್ಥಾನಕ್ಕೆ | ಡಿಗ್ರಿ (ಕೋನಗಳಲ್ಲಿ) | ಅಂತರ (ಮೀಟರಗಳಲ್ಲಿ) |
|---|---|---|
| ಎ–ಬಿ | 67° | 400 |

| ಸ್ಥಾನದಿಂದ ಸ್ಥಾನಕ್ಕೆ | ಡಿಗ್ರಿ (ಕೋನಗಳಲ್ಲಿ) | ಅಂತರ (ಮೀಟರಗಳಲ್ಲಿ) |
|---|---|---|
| ಬಿ–ಸಿ | $120^\circ$ | 72 |
| ಸಿ–ಡಿ | $96^\circ$ | 128 |

**ಪೂರ್ವ:** ಸೀಮಾ ರೇಖೆಯು ಕ್ಷೇತ್ರದ ಸ.ನಂ.39ರ ಈಶಾನ್ಯ ದಿಕ್ಕಿನ ಮೂಲೆಯಲ್ಲಿ ಸ.ನಂ.39, 40 ಹಾಗೂ ಮುಗಳಿ ಗ್ರಾಮಕ್ಕೆ ಹೋಗುವ ರಸ್ತೆಯ ಮೇಲೆ ಸ್ಥಾನ ಸಂಖ್ಯೆ **'ಡಿ'** ಯಿಂದ $168^\circ$ ಕೋನದೊಂದಿಗೆ ಆರಂಭವಾಗಿ ಮುಗಳಿ ಗ್ರಾಮದ ಸ.ನಂ.40 ಹಾಗೂ 15 ನ್ನು ಹೊರತು ಪಡಿಸಿ ಇವುಗಳ ಪಶ್ಚಿಮದ ಗಡಿಗುಂಟ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸೇರುವ ಸ್ಥಳದಲ್ಲಿ ಆಗ್ನೇಯ ದಿಕ್ಕಿನ ಮೂಲೆಯಲ್ಲಿ ಸ.ನಂ.39, 15 ಮತ್ತು 16ರ ಗಡಿಗಳು ಸೇರುವ ಸ್ಥಳದಲ್ಲಿ **'ಎಫ್'** ಸ್ಥಾನವನ್ನು ಸೇರುತ್ತದೆ.

**ಪೂರ್ವದಲ್ಲಿ ಸೀಮಾ ರೇಖೆಯು ಈ ಕೆಳಗಿನಂತೆ ಚಲಿಸಿರುತ್ತದೆ.**

| ಸ್ಥಾನದಿಂದ ಸ್ಥಾನಕ್ಕೆ | ಡಿಗ್ರಿ (ಕೋನಗಳಲ್ಲಿ) | ಅಂತರ (ಮೀಟರಗಳಲ್ಲಿ) |
|---|---|---|
| ಡಿ–ಇ | $168^\circ$ | 432 |
| ಇ–ಎಫ್ | $168^\circ$ | 96 |

**ದಕ್ಷಿಣ:** ಸೀಮಾ ರೇಖೆಯು ಮುಗಳಿ ಗ್ರಾಮದ ಸ.ನಂ.39 ರ ಆಗ್ನೇಯ ದಿಕ್ಕಿನ ಮೂಲೆಯಲ್ಲಿ ಸದರಿ ಸ.ನಂ.15, 16 ಮತ್ತು 39 ಗಡಿಗಳು ಸೇರುವ ಸ್ಥಳದಲ್ಲಿ ಸ್ಥಾನ **'ಎಫ್'** ದಿಂದ $260^\circ$ ಕೋನದೊಂದಿಗೆ ಆರಂಭವಾಗಿ ಮುಂದೆ ಸದರಿ ಗ್ರಾಮದ ಸ.ನಂ.16, 19 ಮತ್ತು 18ಗಳನ್ನು ಹೊರತು ಪಡಿಸಿ ಇವುಗಳ ಉತ್ತರದ ಗಡಿಗುಂಟಾ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಕ್ಷೇತ್ರದ ನೈರುತ್ಯ ದಿಕ್ಕಿನ ಮೂಲೆಯಲ್ಲಿ ಸ.ನಂ.18, 23 ಮತ್ತು 39ರ ಗಡಿಗಳು ಸೇರುವ ಸ್ಥಳದಲ್ಲಿ ಸ್ಥಾನ ಸಂಖ್ಯೆ **'ಜೆ'** ಯನ್ನು ಸೇರುತ್ತದೆ.

**ದಕ್ಷಿಣದಲ್ಲಿ ಸೀಮಾ ರೇಖೆಯು ಈ ಕೆಳಗಿನಂತೆ ಚಲಿಸಿರುತ್ತದೆ.**

| ಸ್ಥಾನದಿಂದ ಸ್ಥಾನಕ್ಕೆ | ಡಿಗ್ರಿ (ಕೋನಗಳಲ್ಲಿ) | ಅಂತರ (ಮೀಟರಗಳಲ್ಲಿ) |
|---|---|---|
| ಎಫ್–ಜಿ | $260^\circ$ | 136 |
| ಜಿ–ಎಚ್ | $260^\circ$ | 48 |
| ಎಚ್–ಐ | $260^\circ$ | 208 |
| ಐ–ಜೆ | $219^\circ$ | 128 |

**ಪಶ್ಚಿಮ:** ಸೀಮಾ ರೇಖೆಯು ಕ್ಷೇತ್ರದ ಸ.ನಂ.39ರ ನೈರುತ್ಯ ದಿಕ್ಕಿನ ಮೂಲೆಯಲ್ಲಿ ಸ್ಥಾನ ಸಂಖ್ಯೆ **'ಜೆ'** ಯಿಂದ $336^\circ$ ಕೋನದೊಂದಿಗೆ ಆರಂಭವಾಗಿ ಮುಂದೆ ಸದರಿ ಗ್ರಾಮದ ಸ.ನಂ.23ನ್ನು ಹೊರತು ಪಡಿಸಿ ಇದರ ಪೂರ್ವದ ಗಡಿಗುಂಟ ಉತ್ತರಾಭಿಮುಖವಾಗಿ ಚಲಿಸುತ್ತಾ ಮುಂದೆ ಸ್ಥಾನ ಸಂಖ್ಯೆ **'ಎಲ್'** ನಿಂದ ಕ್ಷೇತ್ರದ ವಾಯುವ್ಯ ದಿಕ್ಕಿನ ಮೂಲೆಯಲ್ಲಿ ಸ.ನಂ.39 ಮತ್ತು 23ರ ಗಡಿಗಳು ಸೇರುವ ಸ್ಥಳದಿಂದ ಇದರ ಮೂಲ ಸ್ಥಾನದಿಂದ ಎ ಸ್ಥಳವನ್ನು ಸೇರುತ್ತದೆ.

**ಪಶ್ಚಿಮದಲ್ಲಿ ಸೀಮಾ ರೇಖೆಯು ಈ ಕೆಳಗಿನಂತೆ ಚಲಿಸಿರುತ್ತದೆ.**

| ಸ್ಥಾನದಿಂದ ಸ್ಥಾನಕ್ಕೆ | ಡಿಗ್ರಿ (ಕೋನಗಳಲ್ಲಿ) | ಅಂತರ (ಮೀಟರಗಳಲ್ಲಿ) |
|---|---|---|
| ಜೆ–ಕೆ | $336^\circ$ | 320 |
| ಕೆ–ಎಲ್ | $332^\circ$ | 112 |
| ಎಲ್–ಎ | $351^\circ$ | 208 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಪಿ.ಆರ್. 717

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಮಮಇ 255 ಮಭಾಬ 2008, ಬೆಂಗಳೂರು, ದಿನಾಂಕ: 6ನೇ ಮೇ 2010**

ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ನಿಯಮಗಳು 2007ರ ನಿಯಮ 91ರ ಅನ್ವಯ ಬಾಲನ್ಯಾಯ ಮಂಡಳಿ ಮತ್ತು ಮಕ್ಕಳ ಕಲ್ಯಾಣ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡಲು ಈ ಕೂಡಲೇ ಜಾರಿಗೆ ಬರುವಂತೆ 3 ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಈ ಕೆಳಗೆ ಸೂಚಿಸಿದ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ:–

| ಕ್ರ. ಸಂ. | ಆಯ್ಕೆ ಮಾಡಿದವರ ಹೆಸರು<br>ಶ್ರೀಯುತರು/ಶ್ರೀಮತಿ | |
|---|---|---|
| 1] | ಮಾನ್ಯ ನ್ಯಾಯಮೂರ್ತಿ ಶ್ರೀ ಎಂ.ಪಿ. ಚಿನ್ನಪ್ಪ (ನಿವೃತ್ತ)<br>ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರು | ಅಧ್ಯಕ್ಷರು |
| 2] | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 3] | ಸಾಥಿ, ಓಕಳಿಪುರಂ, ಬೆಂಗಳೂರು,<br>(Society for Assistance to Children in Difficult situation) | ಸದಸ್ಯರು |
| 4] | ಬಾಸ್ಕೋ,<br>ಚಾಮರಾಜಪೇಟೆ, ಬೆಂಗಳೂರು | ಸದಸ್ಯರು |
| 5] | ರಿಜಿಸ್ಟ್ರಾರ್, ನಿಮಾನ್ಸ್, ಬೆಂಗಳೂರು | ಸದಸ್ಯರು |
| 6] | ಪ್ರೊಫೆಸರ್, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್‌ಸಿಟಿ, ಬೆಂಗಳೂರು | ಸದಸ್ಯರು |
| 7] | ಬಿ.ಪಾರ್ಥಸಾರಥಿ, ರಾಜ್ಯ ಮಾನವ ಹಕ್ಕುಗಳ ಆಯೋಗದ ಸದಸ್ಯರು | ಸದಸ್ಯರು |

ಈ ಮೇಲೆ ಸೂಚಿಸಿದ ಆಯ್ಕೆ ಸಮಿತಿಯು ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ನಿಯಮಗಳು 2007ರ ನಿಯಮ 92ರನ್ವಯ ಈ ಕೆಳಗೆ ಸೂಚಿಸಿದ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

1) ಆಯ್ಕೆ ಸಮಿತಿಯು ಬಾಲನ್ಯಾಯ ಮಂಡಳಿ ಮತ್ತು ಮಕ್ಕಳ ಕಲ್ಯಾಣ ಸಮಿತಿಗಳಿಗೆ ಸದಸ್ಯರುಗಳನ್ನು ಆಯ್ಕೆ ಮಾಡಲು ಸಾರ್ವಜನಿಕ ಪ್ರಕಟಣೆಯ ಮೂಲಕ ಸ್ವೀಕರಿಸಲಾದ ಅರ್ಜಿಗಳನ್ನು ಪರಿಶೀಲಿಸಿ ಪರಿಗಣಿಸತಕ್ಕದ್ದು.

2) ಸಾರ್ವಜನಿಕ ಪ್ರಕಟಣೆಯ ಮೂಲಕ ಸ್ವೀಕರಿಸಲಾದ ಅರ್ಜಿಗಳನ್ನು ಪರಿಗಣಿಸಿ ಸದಸ್ಯರನ್ನು ಆಯ್ಕೆ ಮಾಡಿ ರಾಜ್ಯ ಸರ್ಕಾರಕ್ಕೆ ಆಯ್ಕೆ ಪಟ್ಟಿಯನ್ನು (Panel of names) ಸಲ್ಲಿಸತಕ್ಕದ್ದು.

3) ಸಮಿತಿಯು ಕೋರಂ ರಚಿಸಲು ಕನಿಷ್ಠ 4 ಸದಸ್ಯರು ಹಾಜರಿರತಕ್ಕದ್ದು.

4) ಆಯ್ಕೆ ಸಮಿತಿಯು ಬಾಲನ್ಯಾಯ ಮಂಡಳಿ ಮತ್ತು ಮಕ್ಕಳ ಕಲ್ಯಾಣ ಸಮಿತಿಗಳಿಗೆ ಸದಸ್ಯರನ್ನು ಆಯ್ಕೆಮಾಡಿ ಶಿಫಾರಸ್ಸು ಮಾಡುವ ಸಂದರ್ಭದಲ್ಲಿ ಸದಸ್ಯರ ಒಂದು ಹೆಚ್ಚುವರಿ ಪಟ್ಟಿಯನ್ನು (Panel of names) ಸರ್ಕಾರಕ್ಕೆ ಅನಿವಾರ್ಯ ಸಂದರ್ಭಗಳಲ್ಲಿ ಉಂಟಾಗುವ ಖಾಲಿಜಾಗವನ್ನು ಭರ್ತಿ ಮಾಡುವ ಸಲುವಾಗಿ ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶಿವಕುಮಾರ್**

ಪಿ.ಆರ್. 728

ಸರ್ಕಾರದ ಅಧೀನ ಕಾರ್ಯದರ್ಶಿ–1,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

### NOTIFICATION

**No. HFW 244 MPS 2010, Bangalore, dated: 10th August 2010**

Government of Karnataka have promulgated an Act (Act 15/2006) called "the Karnataka Professional Educational Institutions (Regulation of Admission and Fixation of Fee)(Special Provisions) Act, 2006." In compliance of the provisions of this Act and the consensual agreement reached between the Government and Private Unaided Professional Educational Institutions with regard to admission and

fixation of fees for professional courses, Government shall notify the number of seats to be allotted and fee chargeable for the academic year 2010-11 for the students selected for Medical and Dental Courses.

2) As per section 4 of the said Act, Government shall notify the Fee Structure to be chargeable for the academic year 2010-11 from the candidates selected for Medical and Dental Courses as per the consensual agreement reached between the Government and Private Unaided Professional Educational Institutions.

3) In pursuant of section 5 of the Act, and as per the consensual agreement reached between the Government and Private Unaided Professional Educational Institutions, 42% of the Government seats for Medical and 35% for Dental in Non-Minority Private Unaided Professional Educational Institutions and 27% of the Government seats for Medical and 25% of the Government seats for Dental in Minority Private Unaided Professional Educational Institutions are earmarked for the candidates selected by Karnataka Examination Authority to Medical and Dental Courses for the academic year 2010-11.

4) In pursuance of the section 4 of the Act, Government hereby notify the fee chargeable for the academic year 2010-11 from the candidates selected for Medical and Dental Courses as shown in **Annexure-III**.

5) Therefore, in exercise of powers conferred under section 5(2) of "the Karnataka Professional Educational institutions (Regulation of admission and Fixation of Fee)(Special Provisions) Act, 2006" Government hereby notify the 2nd additional seat matrix and fee structure for the academic year 2010-11 for Medical and Dental UG (MBBS/BDS) Courses, in Government Autonomous Institutions and Government quota in Private Unaided Professional Educational Institutions as per **ANNEXURE I to III** appended to this notification.

By Order and in the name of the Governor of Karnataka,

**V. SREERAMA REDDY**

Under Secretary to Government,

Health and Family Welfare Department,

(Medical Education)

**ANNEXURE-I to Government Notification No:HFW 244 MPS 2010, Dated 10.08.2010**

**Intake of I MBBS seats and distribution of Private Medical College Government and Management seats for the academic year 2010-11**

| Sl No | Name of the College | Total Seats | 15% All India Quota seats | State Government Seats | |
|---|---|---|---|---|---|
| | Private Medical College (Non-minority) | Total seats | - | Government seats 42% | Management seats 58% |
| 1 | Dr. B.R. Ambedkar Medical College, KG Halli, Bangalore | 100 | - | 42 | **58** |
| | | 100 | - | 42 | **58** |

By Order and in the name of the Governor of Karnataka,

**V. SREERAMA REDDY**

Under Secretary to Government,

Health and Family Welfare Department,

(Medical Education)

**ANNEXURE-II to Government Notification No:244 MPS 10, Dated 10.08.2010**

**STATEMENT OF 1 MBBS GOVERNMENT SEATS UNDER GENERAL RURAL AND KANNADA MEDIUM FOR THE ACADEMIC YEAR 2010-11**

| Sl. No. | Name of the College | Govt. Seats | GM G | GM R | GM KM | CI G | CI R | CI KM | 2A G | 2A R | 2A KM | 2B G | 2B R | 2B KM | 3A G | 3A R | 3A KM | 3B G | 3B R | 3B KM | SC G | SC R | SC KM | ST G | ST R | ST KM |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| 1. | Dr. B.R. Ambedkar Medical College Bangalore | 42 | 17 | 3 | 1 | 2 | 0 | 0 | 5 | 1 | 0 | 2 | 0 | 0 | 2 | 0 | 0 | 2 | 0 | 0 | 5 | 1 | 0 | 1 | 0 | 0 |

**V. SREERAMA REDDY**

Under Secretary to Government,

Health and Family Welfare Department,

(Medical Education)

**ANNEXURE-III to Government Notification No:HFW 244 MPS 2010, Dated: 10.08.2010**

**Fee Structure for Under Graduate Medical and Dental Courses for the Academic year 2010-11**

| **1. Tuition fee in Government Colleges** | | |
|---|---|---|
| **Course** | **Tuition Fee** | |
| MBBS | Rs. 16,700.00 | |
| BDS | Rs. 14,400.00 | |
| **2. Non-Minority Private Unaided Professional Educational Institutions** | | |
| **Course** | **Tuition Fee for Government Seats** | **Management Quota Fee (Maximum)** |
| MBBS | Rs. 35,000.00 | Rs. 3,25,000.00 |
| BDS | Rs. 25,000.00 | Rs. 2,30,000.00 |
| **3. Fee Structure for Minority Private Unaided Professional Educational Institutions** | | |
| **Course** | **Tuition Fee for Government Seats** | **Management Quota Fee (Maximum)** |
| MBBS | Rs. 35,000.00 | Rs. 3,25,000.00 |
| BDS | Rs. 25,000.00 | Rs. 2,30,000.00 |

**V. SREERAMAREDDY**

Under Secretary to Government

P.R. 751 Health and Family Welfare Department (Medical Education)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 529 ವೆಚ್ಚ–12/10, ಬೆಂಗಳೂರು, ದಿನಾಂಕ: 5ನೇ ಆಗಸ್ಟ್, 2010**

ಖಜಾನೆ–II ಅನಾವರಣಗೊಳ್ಳುವವರೆವಿಗೆ ಖಜಾನೆ ಇಲಾಖೆ ನೆಟ್‌ವರ್ಕ್‌ಗೆ ಸಂಬಂಧಿಸಿದಂತೆ ಸಲಹೆಗಳನ್ನು ಮತ್ತು ಪ್ರಾಜೆಕ್ಟ್ ನಿರ್ವಹಣಾ ಸೇವೆಗಳನ್ನು ಮಾಸಿಕ ರೂ.2.50 ಲಕ್ಷಗಳ ವೆಚ್ಚದಲ್ಲಿ (ತೆರಿಗೆ ಹೊರತುಪಡಿಸಿ) ಮೆ:ಎಸ್.ಟಿ.ಪಿ.ಐ. ರವರಿಂದ ನೇರವಾಗಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಮೆ:ಎಸ್.ಟಿ.ಪಿ.ಐ. ಸಂಸ್ಥೆಯು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಗಳು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 740 ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ: ಆಇ 614 ವೆಚ್ಚ–12/10, ಬೆಂಗಳೂರು, ದಿನಾಂಕ: 4ನೇ ಆಗಸ್ಟ್, 2010**

ಕರ್ನಾಟಕ ರಾಜ್ಯ ಸಹಕಾರಿ ಮಾರಾಟ ಮಹಾಮಂಡಳ ನಿಯಮಿತವು ರಾಜ್ಯದಲ್ಲಿ ನಿರ್ಮಿಸುತ್ತಿರುವ 16 ಗೋಡೌನ್‌ಗಳ Third Party Quality Inspection ಕಾರ್ಯವನ್ನು ರೂ.14.10 ಲಕ್ಷಗಳ ವೆಚ್ಚದಲ್ಲಿ ನೇರವಾಗಿ M/s Civil Aid Techno Clinic, ಬೆಂಗಳೂರು ಇವರಿಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಹಕಾರ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 741 ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ: ಆಇ 607 ವೆಚ್ಚ–12/10, ಬೆಂಗಳೂರು, ದಿನಾಂಕ: 4ನೇ ಆಗಸ್ಟ್, 2010**

ನವದೆಹಲಿಯ ಕರ್ನಾಟಕ ಭವನದ ಅನೆಕ್ಸ್ ಕಟ್ಟಡಕ್ಕೆ ಅಗತ್ಯವಿರುವ ಪೀಠೋಪಕರಣಗಳನ್ನು ರೂ.24,51,660.00 ವೆಚ್ಚದಲ್ಲಿ ನೇರವಾಗಿ ಕಾವೇರಿ ಕರಕುಶಲ ವಸ್ತು ನಿಗಮ, ಬೆಂಗಳೂರು ಇವರಿಂದ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕಾವೇರಿ ಕರಕುಶಲ ವಸ್ತು ನಿಗಮವು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಗಳು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 742 ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ: ಆಇ 525 ವೆಚ್ಚ–12/10, ಬೆಂಗಳೂರು, ದಿನಾಂಕ: 5ನೇ ಆಗಸ್ಟ್, 2010**

ಮೆ: ಮೈಸೂರ್ ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ (ಎಂ.ಇ.ಐ) ಸಂಸ್ಥೆಯು ಉತ್ಪಾದಿಸುವ 11 ಕೆ.ವಿ. ಸ್ವಿಚ್‌ಗೇರ್‌ಗಳು, 11 ಕೆ.ವಿ.ಆರ್.ಎಂ.ಯು.ಗಳು ಮತ್ತು ಅವುಗಳ ಬಿಡಿಭಾಗಗಳು ಹಾಗೂ ಅವುಗಳಿಗೆ ಸಂಬಂಧಪಟ್ಟಂತೆ ಅಗತ್ಯವಿರುವ ದುರಸ್ತಿ ಸೇವೆಗಳನ್ನು ಕೆ.ಪಿ.ಟಿ.ಸಿ.ಎಲ್ ಮತ್ತು ಎಲ್ಲಾ ESCOM ಸಂಸ್ಥೆಗಳು ಮಾರುಕಟ್ಟೆ ದರದಲ್ಲಿನ ಅತಿಕಡಿಮೆ ದರಕ್ಕೆ ಮೆ:ಎಂ.ಇ.ಐ. ಸಂಸ್ಥೆಯೊಡನೆ ಸಂಧಾನವೇರ್ಪಡಿಸುವ ಷರತ್ತಿಗೊಳಪಟ್ಟು ಮೆ:ಎಂ.ಇ.ಐ. ಸಂಸ್ಥೆಯಿಂದ ನೇರವಾಗಿ ಖರೀದಿಸಲು ಕರ್ನಾಟಕ

ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ಒಂದು ವರ್ಷದ ಅವಧಿಗೆ ವಿನಾಯಿತಿ ನೀಡಿದೆ.

ಮೆ: ಎಂ.ಇ.ಐ. ಸಂಸ್ಥೆಯು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಗಳು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 743

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ: ಆಇ 566 ವೆಚ್ಚ–12/10, ಬೆಂಗಳೂರು, ದಿನಾಂಕ: 5ನೇ ಆಗಸ್ಟ್, 2010**

ಟ್ರಾನ್ಸ್‌ಫಾರ್ಮರ್ಸ್ (Transformers) ಹಾಗೂ ಮತ್ತಿತರ ಸೇವೆಗಳ ದರವನ್ನು ತಜ್ಞ ಸಮಿತಿಯು ನಿರ್ಧರಿಸುವ ಷರತ್ತುಗೊಳಪಟ್ಟು ಎಲ್ಲಾ ESCOMN ಗಳು ಟ್ರಾನ್ಸ್‌ಫಾರ್ಮರ್ಸ್ (Transformers) ಹಾಗೂ ಮತ್ತಿತರ ಸೇವೆಗಳನ್ನು ಕರ್ನಾಟಕ ವಿದ್ಯುತ್ ಕಾರ್ಖಾನೆ (ಕವಿಕಾ) ಯಿಂದ ನೇರವಾಗಿ ಸಂಗ್ರಹಣೆ ಮಾಡಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಅಧಿಸೂಚನೆ ಸಂಖ್ಯೆ:ಆಇ 720 ವೆಚ್ಚ–12/2009 ದಿನಾಂಕ:20.06.2009ರಲ್ಲಿ ಇಂಧನ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ನೀಡಲಾಗಿದ್ದ ವಿನಾಯಿತಿಯನ್ನು ದಿನಾಂಕ:20.06.2010 ರಿಂದ ಜಾರಿಗೊಳ್ಳುವಂತೆ ಒಂದು ವರ್ಷದ ಅವಧಿಗೆ ಮಾತ್ರ ವಿಸ್ತರಿಸಿದೆ.

ಕರ್ನಾಟಕ ವಿದ್ಯುತ್ ಕಾರ್ಖಾನೆ (ಕವಿಕಾ) ಸಂಸ್ಥೆಯು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಗಳು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 744

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ: ಆಇ 578 ವೆಚ್ಚ–12/10, ಬೆಂಗಳೂರು, ದಿನಾಂಕ: 6ನೇ ಆಗಸ್ಟ್, 2010**

ದಿನಾಂಕ:25.06.2010 ರಂದು ನಡೆದ ಸಾಧನಾ ಸಮಾವೇಶದಲ್ಲಿ ಭಾಗವಹಿಸಿದ್ದ ಸಾರ್ವಜನಿಕರಿಗೆ ಊಟದ ವ್ಯವಸ್ಥೆಯನ್ನು ರೂ.40.00 ಲಕ್ಷಗಳ ವೆಚ್ಚದಲ್ಲಿ ಕಲ್ಪಿಸಿದ ಸಂಬಂಧ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 745

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ: ಆಇ 626 ವೆಚ್ಚ–12/10, ಬೆಂಗಳೂರು, ದಿನಾಂಕ: 3ನೇ ಆಗಸ್ಟ್, 2010**

ದಿನಾಂಕ:07.08.2010ರಂದು ಬೆಂಗಳೂರು ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ನಡೆಯಲಿರುವ ರಾಜ್ಯಮಟ್ಟದ ಸಾಕ್ಷರ ಭಾರತ್ ಕಾರ್ಯಕ್ರಮದ ಉದ್ಘಾಟನಾ ಸಮಾರಂಭದ ಸಲುವಾಗಿ ವೇದಿಕೆ ವ್ಯವಸ್ಥೆ ಹಾಗೂ ಇನ್ನಿತರೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ರೂ.17,83,204.00 ವೆಚ್ಚದಲ್ಲಿ ನೇರವಾಗಿ ಮಾರ್ಕೆಟಿಂಗ್ ಕನ್ಸಲ್ಟೆಂಟ್ಸ್ ಅಂಡ್ ಏಜೆನ್ಸೀಸ್ ಲಿಮಿಟೆಡ್,

ಬೆಂಗಳೂರು ಇವರಿಗೆ ವಹಿಸಲು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಶಿಕ್ಷಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಮೆ:ಎಂ.ಸಿ. ಅಂಡ್ ಎ ಸಂಸ್ಥೆಯು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಗಳು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್. 746 ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 138 ಪೊಪೆಸೆ 2010, ಬೆಂಗಳೂರು, ದಿನಾಂಕ: 7ನೇ ಆಗಸ್ಟ್, 2010**

ಶ್ರೀ ಕೆ. ಶಿವರಾಂ, ವಿಶೇಷಾಧಿಕಾರಿ, (ಜಿಲ್ಲಾ ಪಂಚಾಯತ್) ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಇವರನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಶ್ರೀ ಅನಿಲ್‌ಕುಮಾರ್ ಜಾ, ಐಎಎಸ್, ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, (ವೆಚ್ಚ) ಇವರ ಸ್ಥಳದಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದ ಆಡಳಿತ ಮಂಡಳಿಯು ನಿರ್ದೇಶಕರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 747 ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 147 SLU 2010 (P), Bangalore, Dated: 2nd August 2010**

In exercise of the powers conferred by sub-section (2) of section 1 of the Karnataka Lokayukta (Amendment) Act, 2010 (Karnataka Act 25 of 2010) the Government of Karnataka hereby appoints the 23rd July 2010 as the date on which the said Act shall come into force.

By Order and in the name of the Governor of Karnataka,

**P. MARKANDEYA**

Under Secretary to Government,

Department of Personnel and Administrative Reforms (Service Rules-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 147 ಸೇಲೋಯು 2010, ಬೆಂಗಳೂರು, ದಿನಾಂಕ: 2ನೇ ಆಗಸ್ಟ್, 2010**

ಕರ್ನಾಟಕ ಲೋಕಾಯುಕ್ತ (ತಿದ್ದುಪಡಿ) ಅಧಿನಿಯಮ, 2010 (2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 25) ರ 1ನೇ ಪ್ರಕರಣ (2)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ದಿನಾಂಕ: 23.07.2010 ರಿಂದಲೇ ಸದರಿ ಅಧಿನಿಯಮದ ಉಪಬಂಧಗಳು ಜಾರಿಗೆ ಬಂದಿವೆಯೆಂದು ಪರಿಭಾವಿಸುತ್ತದೆಯೆಂದು ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಪಿ.ಆರ್. 748 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

## HOME SECRETARIAT

### NOTIFICATION No. HD 137 MOHIBA 2010, Bangalore, Dated: 30th July 2010

In exercise of the powers conferred by sub-section (2) of section 45 of the Unlawful Activities (Prevention) Act, 1967 (Central Act 37 of 1967) read with clause (b) of sub-rule (1) of rule 2 of the Unlawful Activities (Prevention) (Recommendation and Sanction of Prosecution) Rules, 2008, the Government of Karnataka hereby appoints the Director of Prosecutions and Government Litigations, Bangalore to be the authority for the purpose of the said provisions.

By Order and in the name of the Governor of Karnataka,

**P. SHIVARAMA BHAT**

P.R. 749 Under Secretary to Government, Home Department (Crimes)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಲಾ 225 ಎಲ್‌ಸಿಇ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್, 2010

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 26(2) ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶ್ರೀಪಾಲ ತಾತಪ್ಪ ಮನ್ನೋಳಿ, ವಕೀಲರು, ಇವರನ್ನು ಚಿಕ್ಕೋಡಿಯ ತ್ವರಿತಗತಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರನ್ನಾಗಿ, ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ಹೊಸದಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾ. ಮಹಾಲಕ್ಷ್ಮಮ್ಮ**

ಪಿ.ಆರ್. 750 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## COMMERCE AND INDUSTRIES SECRETARIAT

### NOTIFICATION No. CI.273:MMM.2009, Bangalore, Dated: 5th August 2010

In pursuance of Sub-Section 22 of Section 8 of the Mines and Minerals (Development and Regulation) Act, 1957, the Government of Karnataka hereby accords sanction for First renewal of Mining Lease No. 1932/1998 for a period of 20 years (Twenty years only) w.e.f. 02.03.2004, in favour of M/s Karnataka Limpo Cement Industries for Iron ore and Red Ochre over an area of 15-00 acres (Fifteen acres only) in Sy.No. 150 of Rajathadripura village, Tiptur taluk, Tumkur District, as per the sketch furnished by the Director, Department of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 as amended from time to time and other applicable Acts and Rules including Forest (Conservation) Act, 1980, Environmental Protection Act, 1986, EIA Notification 2006 etc., as amended from time to time and Rules made there under.

Sanction of this Mining lease is also subject to the terms and conditions appended hereto and also subject to Court proceedings if any.

The Department of Mines of Geology is directed to take necessary action to measure the area scientifically through GPS and to publish the Digitized Map in the Website.

The Mining lease should be executed only after submission of all the statutory documents/clearances, by the applicant.

By Order and in the name of the Governor of Karnataka,

**A. CHANNEGOWDA**

Under Secretary to Govt.(Mines), Commerce & Industries Department.

### TERMS AND CONDITIONS OF THE FIRST RENEWAL OF MINING LEASE NO.1932/1998 SANCTIONED IN GOVERNMENT NOTIFICATION NO.CI.273:MMM.2009 Dated 05.08.2010

a) Mining lease should be in respect of **Iron Ore and Red Ochre** only. If other minerals are found in association with **Iron Ore and Red Ochre,** they should be brought to the notice of Government and if the lessee desires to mine these minerals along with **Iron Ore and Red Ochre,** he/she/it should do so only after the consent of Government is obtained in writing.

b) If beryl or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.
c) The lease shall also be subject to the provisions of Rules in Chapter IV of the Minerals Concession Rules, 1960.
d) The lease shall also be subject to the Rules, issued U/S 18 of the Mines & Minerals (D&R) Act, 1957.
e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.
f) The lessee shall be governed by all conditions that may be incorporated in the lease deed, to be executed.
g) The lessee shall abide by the rules contained in the Karnataka State Forest Manual, if the lease area covers any forestland.
h) Government shall have the right of purchasing the ore at current market rates.
i) The lease would be determined if the lessee fails to commence execution of the lease deed.
j) The area mentioned above is subject to verification after actual survey and demarcation.
k) The lease shall be for a period of **Twenty Years. w.e.f. 02.03.2004.**
l) The lessee/s shall pay Royalty, Cesses and Dead rent as prescribed vide Government of India's Notification published in the Gazette of India, Extraordinary, Part II-Section 3-Sub-sectio(i) vide G.S.R.574(E) dated 13th August 2009 and G.S.R. 575(E) dated 13th August, 2009, respectively.

Local & other Cesses: As prevalent in **Tumkur** District.

Royalty: At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

o) The minerals should be value added and the Lessee should adhere to existing National Mineral Policy and Karnataka Mineral Policy, 2008.

**A. CHANNEGOWDA**

P.R. 752 Under Secretary to Govt.(Mines), Commerce & Industries Department.

**LAW, JUSTICE AND HUMAN RIGHTS SECRETARIAT**

**NOTIFICATION No. LAW 106 LCL 2010, Bangalore, Dated: 7th August 2010**

In supersession of the Notification No.LAW 47 LCL 2006 dated 17.04.2006 and in exercise of the powers conferred by section 4 of the Karnataka Advocates Welfare Fund Act 1983 (Karnataka Act 2 of 1985) the Government of Karnataka hereby notify the following members to the Karnataka Advocates Welfare Fund Trustee Committee as nominated by the Karnataka State Bar Council under section 4(3)(d) of the said Act with immediate effect.

1) Shri Desai Rajendra .C, Advocate-Member
No.327, 2nd Main, 4th Cross, behind
Community Hall, Bharathinagara,
Dharwad-580 001
2) Shri Yogeesh B.S. Advocate-Member,
Soudharma, Kuvempunagara, I Main, 6th Cross,
Behind M.G. Stadium, Tumkur

3) Shri Muniyappa, Advocate-Member,
No.71, C.M.Plaza, I Main, 8th Cross, S.R. Nagara, Bangalore-27

They shall hold office for a period of four years or for the duration of their membership in Karnataka State Bar Council whichever is earlier.

By Order and in the name of the Governor of Karnataka,
**SHAKUNTHALA H.R.**
Under Secretary to Government (Admn-2),
Law, Justice and Human Rights Department.

P.R. 753

**NOTIFICATION No. LAW 134 LCL 2009, Bangalore, Dated: 6th August 2010**

In supersession of the powers conferred by sub-section (2) of section 1 of "The Karnataka Advocates' Welfare Fund (Amendment) Act, 2010" (Karnataka Act No.28 of 2010) the Government of Karnataka hereby appoints 6th August 2010 as the date on which all the provisions of the said Act, shall come into force.

By Order and in the name of the Governor of Karnataka,
**S. SIDDALINGESH**
Secretary to Government,
Department of Law, Justice and Human Rights

P.R. 754

**ಕಂದಾಯ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆರ್‌ಡಿ 37 ಎಲ್‌ಜಿಟಿ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ಆದೇಶಿಸಿದೆ.

| ಕ್ರ. ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಚಿಕ್ಕನಾಯಕನಹಳ್ಳಿ | 1) ಶ್ರೀ ಸಿ.ಬಿ. ಸುರೇಶ್‌ಬಾಬು, ಶಾಸಕರು | ಅಧ್ಯಕ್ಷರು |
| | | 2) ಶ್ರೀ ಹೆಚ್. ಸಿದ್ದರಾಮಯ್ಯ ಬಿನ್ ಹೊನ್ನಪ್ಪ ಅರಳೇಪೇಟೆ, ಹಾಗಲವಾಡಿ ರಸ್ತೆ, ಚಿಕ್ಕನಾಯಕನಹಳ್ಳಿ | ಸದಸ್ಯರು (ಸಾಮಾನ್ಯ) |
| | | 3) ಶ್ರೀ ಕೆ. ಹನುಮಂತಪ್ಪ ಬಿನ್ ಕಿಟ್ಟಪ್ಪ, ಮಾಚಿಹಳ್ಳಿ ವಡ್ಡರಹಟ್ಟಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು | ಸದಸ್ಯರು (ಪ.ಜಾತಿ) |
| | | 4) ಶ್ರೀಮತಿ ಮಮತಾ ಬಿನ್ ರಂಗಪ್ಪ ತಿಮ್ಮನಹಳ್ಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರ್, ಚಿಕ್ಕನಾಯಕನಹಳ್ಳಿ ತಾಲ್ಲೂಕು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 755

**FOREST, ECOLOGY AND ENVIRONMENT SECRETARIAT**

**NOTIFICATION No. FEE 22 EPC 2009 (P-1), Bangalore, Dated: 4th August 2010**

Whereas, the Karnataka State Pollution Control Board had brought construction projects having a built up area of 2,000 Sqm. and above in the case of commercial building, 5,000 Sqm and above in the case of residential building and 10,000 Sqm and above in the case of institutional buildings in its fold under the consent mechanism as per the stipulations made in the Environment Impact Assessment Notification, 1994 amended on 07.07.2004 by the Ministry of Environment and Forests, New Delhi.

Whereas, the Ministry of Environment and Forests, Government of India thereafter have issued a re-engineered EIA Notification vide No.S.O. 1533 (E) dated 14.09.2006 in supersession of the EIA Notification vide No.S.O.60 (E) dated the 27th January 1994 and subsequent amendments dated 07.07.2004.

Whereas, as per the EIA Notification dated 14.09.2006 the construction projects having a built up area of 20,000 Sqm and above and townships and area development projects covering an area of 50 Hectares and above are only brought under Environment Impact Assessment process.

Whereas, the Karnataka State Pollution Control Board is covering the construction projects with a built up area of less than 20,000 Sqm even after the inception of EIA Notification, 2006 which has been issued in supersession of the EIA notification dated 07.07.2004 under the Environment (Protection) Act, 1986.

After examining the issue in detail, the Government is of the view that the non polluting residential and commercial units of less than 20,000 Sqm of built up area established or to be established in sewered area wherein permission from Bangalore Water Supply and Sewerage Board (BWS&SB)/ BBMP/Municipalities is obtained to discharge sewage in sewer lines and charges paid to them are not covered under the provisions of Water (Prevention andControl of Pollution) Act, 1974, Air (Prevention and Control of Pollution) Act, 1981 and the Environment (Protection) Act, 1986 as ipso facto Water (Prevention and Control of Pollution) Act, 1974 is not attracted and therefore such units do not qualify to be covered under the consent mechanism of the Karnataka State Pollution Control Board.

Now therefore, the Karnataka State Pollution Control Board is directed as under.

The Karnataka State Pollution Control Board shall not ask from the proponents to obtain consent to establish and to operate from the non polluting residential and commercial constructions of less than 20,000 Square metres built up area established or to be established in sewered area wherein permission from Bangalore Water Supply and Sewerage Board (BWS&SB)/BBMP/Municipalities/ Corporation is obtained to discharge sewage in sewer lines and charges paid to these authorities.

This direction is issued as per the powers conferred on the State Government vide section 18 (1) (b) of the Water (Prevention and Control of Pollution) Act, 1974 and the Air (Prevention and Control of Pollution) Act, 1981 and will come into force with immediate effect.

By Order and in the name of the Governor of Karnataka,

**B. MANOHAR**

P.R. 756

Under Secretary to Government,

Forest Ecology and Environment Department (Ecology and Environment).

**ಕಂದಾಯ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಕಂಇ 57 ಎಲ್‌ಆರ್‌ಎ 2010, ಬೆಂಗಳೂರು, ದಿನಾಂಕ: 4ನೇ ಆಗಸ್ಟ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 149 ಎಲ್‌ಆರ್‌ಎ 2008 ದಿನಾಂಕ:21.01.2009ರ ಕ್ರ.ಸಂ.41 ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು ಭೂ ನ್ಯಾಯ ಮಂಡಳಿ ಸದಸ್ಯರ ಪಟ್ಟಿ ಕ್ರಮ ಸಂಖ್ಯೆ (3) ರಲ್ಲಿ **"ಶ್ರೀ ಕೆ.ಎಸ್. ಗುಂಡಪ್ಪ ಶೆಟ್ಟಿ ಬಿನ್ ಕೆ.ಟಿ. ಸತ್ಯನಾರಾಯಣ ಶೆಟ್ಟಿ"** ಇವರ ಹೆಸರಿಗೆ ಬದಲಾಗಿ **"ಶ್ರೀ ಜಿ.ಆರ್. ದಿನೇಶ್ ತಂದೆ ಲೇಟ್ ಶ್ರೀ ಜಿ. ರಾಮಚಂದ್ರಪ್ಪ"** ಮನೆ ನಂ.177, 1ನೇ ಮುಖ್ಯರಸ್ತೆ, ಬನ್ನೇರುಘಟ್ಟ ರಸ್ತೆ, ಗೊಟ್ಟಿಗೆರೆ ಅಂಚೆ, ಬೆಂಗಳೂರು – 560083, ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 757

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಒಇ 149 ಪಿಎಂಎಸ್ 2010, ಬೆಂಗಳೂರು, ದಿನಾಂಕ: 6ನೇ ಆಗಸ್ಟ್, 2010**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯನಿರ್ವಹಿಸಲು ಪಾಸ್ಟರ್ ಎ. ಕಿರುಬೈನಾದನ್, ಇಮ್ಯಾನುವೆಲ್ ಗಾಸ್ಪೆಲ್ ಪ್ರೇಯರ್ ಮಿನಿಸ್ಟ್ರೀಸ್ ಚರ್ಚ್, ನಂ.1/4, 4ನೇ ಕ್ರಾಸ್, 9ನೇ ಮುಖ್ಯರಸ್ತೆ, ಕೆ.ಪಿ. ಅಗ್ರಹಾರ, ಮರಿಯಪ್ಪನಪಾಳ್ಯ, ಮಾಗಡಿ ರಸ್ತೆ, ಬೆಂಗಳೂರು–23 ಇವರಿಗೆ ಮೇಲಿನ ಕಾಯ್ದೆಯಡಿಯಲ್ಲಿ ಬೆಂಗಳೂರು ಜಿಲ್ಲೆ ಆಡಳಿತ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸಿ, ವಿವಾಹ ವಿಧಿಯನ್ನು ನೆರವೇರಿಸಲು ಸದರಿ ಕಾಯ್ದೆಯಡಿಯಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆಲಿಸ್ ಗೊನ್ಸಾಲ್ವಿಸ್**

ಪಿ.ಆರ್. 758

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ರಹದಾರಿ ಮತ್ತು ವಿದೇಶಿಯರು)